ಶ್ರೀ

ಭವಭೂತಿಮಹಾಕವಿಯ

# ಉತ್ತರರಾಮಚರಿತಮ್

1952

ಗ್ರಂಥಕರ್ತ

ಪೊಳಿಯೂರು ಶಂಕರನಾರಾಯಣ ಭಟ್ಟ

ಗವರ್ನಮೆಂಟು ಕಾಲೇಜು,

ಮಂಗಳೂರು.

ಬೆಲೆ

ಎರಡು ರೂಪಾಯಿ ಹನ್ನೆರಡಾಣೆ



ಮುದ್ರಕರು:
ಉದಯ ಪ್ರಿಂಟರ್ಸ್ ಎಂಡ್ ಪಬ್ಲಿಕೇಶನ್ಸ್ ಲಿಮಿಟೆಡ್, ಮಂಗಳೂರು 3

# — ಬಿನ್ನಹ —

ಕುಂದಮಾಲೆಯನ್ನು ಪರಿಶೀಲಿಸುವ ವೇಳೆಗೆ ಭವಭೂತಿಮಹಾಕವಿಯ ಉತ್ತರರಾಮಚರಿತ್ರೆಯನ್ನೂ ಅಲ್ಲಲ್ಲಿ ಇಷ್ಟಿಷ್ಟಾಗಿ ನೋಡಬೇಕಾಯಿತು. ಮಹಾಕವಿಗಳಿಬ್ಬರೂ ಒಂದೇ ವಸ್ತುವನ್ನು ಆರಿಸಿಕೊಂಡು ತಂತಮ್ಮ ಪ್ರತಿಭೆಗೆ ಅನುಸಾರವಾಗಿ ಎರಡು ರೂಪಕರತ್ನಗಳನ್ನು ಸಿದ್ಧಪಡಿಸಿ ಜನಾಂಗದ ಮುಂದೆ ಇಟ್ಟಿರುವಾಗ, ಅವುಗಳ ಪ್ರಯೋಜನವನ್ನು ಕನ್ನಡಿಗರೂ ಪಡೆಯಬೇಕಲ್ಲವೆ; ಎಂಬ ವಿಚಾರವು ತಲೆದೋರುವುದು ಸಹಜವು. ಪ್ರಖ್ಯಾತವಾದ ಉತ್ತರರಾಮಚರಿತ್ರೆಯು ಸಾಮಾನ್ಯವಾಗಿ ಎಲ್ಲಾ ಭಾಷೆಗಳಲ್ಲಿಯೂ ಪರಿವರ್ತಿತವಾಗಿರುವುದು. ಮಾತ್ರವಲ್ಲದೆ, ಒಂದೊಂದು ಭಾಷೆಯಲ್ಲೂ ಹಲವರ ಪ್ರಯತ್ನಗಳು ನಡೆದಿರುವುದನ್ನೂ ನಾವು ಕಾಣಬಹುದು. ಆದರೆ, ನಮ್ಮ ಭಾಷೆಯಲ್ಲಿ ಅದಾವ ಕಾರಣದಿಂದಲೋ ಅದರ ಪೂರ್ಣಸ್ವರೂಪವನ್ನು ನಾವಿನ್ನೂ ಕಾಣದಿರುವೆವು. ಆ ಅನರ್ಘರತ್ನದ ರೂಪರೇಷೆಯನ್ನಾದರೂ ನಾವು ಕಂಡುಕೊಳ್ಳಬೇಕು ಎಂಬ ಉತ್ಸಾಹವು ಆಗಲೇ ನನ್ನನ್ನು ಪ್ರೇರೇಪಿಸಿತು. ಆದರೆ, ಸುಲಭಸಾಧ್ಯವಲ್ಲದ ಕಾರ್ಯದಲ್ಲಿ ಬಂದೊದಗುವ ಎಷ್ಟೆಷ್ಟೋ ಬಗೆಯ ಎಡರುತೊಡರುಗಳನ್ನು ನಿವಾರಿಸಿಕೊಳ್ಳುವ ಚೈತನ್ಯವಿಲ್ಲದೆ ಸಹಜವಾಗಿಯೇ ತತ್ತರಿಸಬೇಕಾಯಿತು. ಕೊನೆಗೆ, ಏನಾದರೂ ಆಗಲಿ; ಹೊಣೆಗಾರಿಕೆ [illegible] ಪ್ರತ್ಯಕ್ಷವಾಗಿಯಾಗಲಿ, ಅಪ್ರತ್ಯಕ್ಷವಾಗಿಯಾಗಲಿ ಈ ಮಾರ್ಗದಲ್ಲಿ ನನ್ನನ್ನು ಪ್ರೋತ್ಸಾಹಿಸುತ್ತಿರುವ ಸಹೃದಯರಾದ ವಿದ್ವಾಂಸರಿಗೇ ಸೇರಿದುದು ಎಂಬ ವಿಶ್ವಾಸದಿಂದ ಸಾಹಸದ ಪರಿಣಾಮವಾದ ಉತ್ತರರಾಮಚರಿತ್ರೆಯ ಈ ಪ್ರತಿಕೃತಿಯನ್ನು ಸಹೃದಯರಿಗೆ ಸಮರ್ಪಿಸಿಬಿಡಬೇಕೆಂಬ ಹಂಬಲದಿಂದ ಮುಂದೆ ಬಂದಿರುವೆನು.

ಇದರ ಹಸ್ತಪ್ರತಿಯನ್ನು ಪರಿಶೀಲಿಸಿ ಅಲ್ಲಲ್ಲಿ ಹಲಕೆಲವು ಸಲಹೆಗಳನ್ನಿತ್ತು ಕಷ್ಟಕಾರ್ಯದಲ್ಲಿ ನನ್ನೊಡನೆ ಸಹಕರಿಸಿದ ನನ್ನ ಸಹೋದರರೂ ಸಹೋದ್ಯೋಗಿಗಳೂ ಆಗಿರುವ ಶ್ರೀಮಾನ್ ಪಿ. ರಾಮಕೃಷ್ಣ ಭಟ್ಟ,

ಶಿರೋಮಣಿ, ವಿದ್ವಾನ್ ಇವರಿಗೆ ನಾನು ಚಿರಋಣಿಯಾಗಿರುವೆನು. ಎಂದಿನಂತೆಯೇ ಇದನ್ನೂ ಸಕಾಲದಲ್ಲಿ ಮುದ್ರಿಸಿಕೊಟ್ಟ 'ಉದಯ ಪ್ರಿಂಟರ್ಸ್, ಎಂಡ್ ಪಬ್ಲಿಕೇಷನ್ಸ್ ಲಿಮಿಟೆಡ್ ಮಂಗಳೂರು, ಈ ಸಂಸ್ಥೆಯವರಿಗೆ ನನ್ನ ಧನ್ಯವಾದಗಳು.

ಇಂತು ಬಿನ್ನಯಿಸುವ ಸಜ್ಜನ ವಿಧೇಯ,

**ಮೊಳೆಯಾರು ಶಂಕರನಾರಾಯಣ ಭಟ್ಟ.**

—

## ಈ ನಾಟಕದಲ್ಲಿ ಬರತಕ್ಕ ಪಾತ್ರಗಳು

| | | | |
|---|---|---|---|
| 1 | ಸೂತ್ರಧಾರ | 16 | ಸೌಧಾತಕಿ |
| 2 | ನಟ | 17 | ಜನಕ |
| 3 | ರಾಮ | 18 | ಅರುಂಧತಿ |
| 4 | ಸೀತೆ | 19 | ಕೌಸಲ್ಯೆ |
| 5 | ಕಂಚುಕಿ | 20 | ಲವ |
| 6 | ಅಷ್ಟಾವಕ್ರ | 21 | ಕುಶ |
| 7 | ಲಕ್ಷ್ಮಣ | 22 | ಬಟುಗಳು |
| 8 | ಪ್ರತೀಹಾರಿ | 23 | ಪುರುಷ |
| 9 | ದುರ್ಮುಖ | 24 | ಚಂದ್ರಕೇತು |
| 10 | ತಾಪಸಿ | 25 | ಸುಮಂತ್ರ |
| 11 | ವಾಸಂತಿ | 26 | ವಿದ್ಯಾಧರ |
| 12 | ಶಂಬೂಕ | 27 | ವಿದ್ಯಾಧರಿ |
| 13 | ತಮಸೆ | 28 | ಭಾಗೀರಥಿ |
| 14 | ಮುರಲೆ | 29 | ಪೃಥಿವಿ |
| 15 | ದಂಡಾಯನ | 30 | ವಾಲ್ಮೀಕಿ |



# ಕವಿಯೂ ಕಾವ್ಯವೂ



ಭಟ್ಟಭವಭೂತಿ— ಎಂದು ಪ್ರಸಿದ್ಧನಾದ ಕವಿಪುಂಗವನ ನಿಜವಾದ ಹೆಸರು "ಶ್ರೀಕಂಠ"ನೆಂಬುದಾಗಿ ತಿಳಿದುಬರುತ್ತದೆ. ಇವನು ನ್ಯಾಯವ್ಯಾಕರಣವೇದಾಂತವೇ ಮೊದಲಾದ ಶಾಸ್ತ್ರಗಳಲ್ಲಿ ಪಾರಂಗತರಾಗಿಯೂ ಬ್ರಹ್ಮವಿದ್ಯೆಯಲ್ಲಿ ನಿರತರಾಗಿಯೂ ಇದ್ದ ಒಂದು ಬ್ರಾಹ್ಮಣ ಕುಟುಂಬದಲ್ಲಿ ಜನ್ಮವೆತ್ತಿದನು. ಇವನು ತನ್ನ ಕುಲಕ್ಕೆ ಉದುಂಬರರು ಎಂಬ ಉಪನಾಮವಿರುವುದೆಂದೂ, ಅವರು ಕಾಶ್ಯಪಗೋತ್ರದವರೂ ಆಪಸ್ತಂಭಸೂತ್ರದವರೂ ಕೃಷ್ಣಯಜುರ್ವೇದದ ತೈತ್ತಿರೀಯಶಾಖಾವಲಂಬಿಗಳೂ ಪುಣ್ಯಶೀಲರೂ ಬ್ರಹ್ಮವಾದಿಗಳೂ ಆಗಿದ್ದು ಪವಿತ್ರಗಳಾದ ಪಂಚಾಗ್ನಿಗಳನ್ನು ಪಾಲಿಸಿಕೊಂಡಿರುವರೆಂದೂ ಹೇಳಿಕೊಂಡಿರುವನು. ಈ ಕುಟುಂಬದಲ್ಲಿ ಮೊದಲೊಬ್ಬ ಮಹಾಕವಿಯಿದ್ದು ತಾನು ಅವನಿಂದ ಐದನೆಯವನೆಂದೂ ತನ್ನ ಪಿತಾಮಹನು ಭಟ್ಟ ಗೋಪಾಲನೆಂದೂ, ತಂದೆಯು ನೀಲಕಂಠನೆಂದೂ, ತಾಯಿಯು ಜತುಕರ್ಣೀ ಎಂದೂ, ಗುರುವು ಜ್ಞಾನನಿಧಿಯೆಂದೂ ಹೇಳಿಕೊಂಡಿರುವನು. "ತಪಸ್ವೀ ತಾಂ ಗತೋಽವಸ್ಥಾಂ ಇತಿ ಸ್ಮೇರಾನನಾವಿವ। ಗಿರಿಜಾಯಾಃ ಸ್ತನೌ ವಂದೇ ಭವಭೂತಿಸಿತಾನನೌ" ಎಂದು ಪಾರ್ವತಿಯನ್ನೂ "ಸಾಂಬಾ ಪುನಾತು ಭವಭೂತಿಪವಿತ್ರಮೂರ್ತಿಃ" ಎಂದು ಈಶ್ವರನನ್ನೂ ಸ್ತುತಿಮಾಡಿದುದರಿಂದ ಇವನನ್ನು "ಭವಭೂತಿ"ಯೆಂದೂ, "ವಶ್ಯವಾಚಃ ಕವೇರ್ವಾಕ್ಯಂ" ಎಂದು ಸ್ವಾಧೀನವಾಕ್ಪ್ರವೃತ್ತಿಯುಳ್ಳವನಾದುದರಿಂದ "ವಶ್ಯವಾಕ್ ಕವಿ" ಎಂದೂ, ವ್ಯಾಕರಣನ್ಯಾಯಮೀಮಾಂಸಾಪರಿಜ್ಞಾತನಾದುದರಿಂದ "ಪದವಾಕ್ಯಪ್ರಮಾಣಜ್ಞ"ನೆಂದೂ, ಚತುಶ್ಶಾಸ್ತ್ರಾಭಿಜ್ಞನಾದುದರಿಂದ "ಭಟ್ಟ"ನೆಂದೂ ಕರೆದುದಾಗಿ ತಿಳಿಯಬರುತ್ತದೆ. "ಭಟ್ಟಭವಭೂತಿ"ಯೆಂದು ಹೇಳಬೇಕಾದಲ್ಲಿ ಸಾಮಾನ್ಯವಾಗಿ ಅವನನ್ನು "ಭವಭೂತಿ"ಯೆಂದೇ ವ್ಯವಹರಿಸುವರು.

**ದೇಶ**— ಇವನು ದಾಕ್ಷಿಣಾತ್ಯನು. ವಿದರ್ಭದೇಶಕ್ಕೆ ಸೇರಿದ

"ಪದ್ಮಪುರ"ವೆಂಬ ನಗರವು ಇವನ ಜನ್ಮಭೂಮಿಯು. ಪದ್ಮಪುರವನ್ನು ಪದ್ಮವಟಿಯೆಂದೂ ಪಾಟಲೀಪುತ್ರವೆಂದೂ ಕೆಲವರು ಹೇಳುವರು. ಪಾಟಲೀಪುತ್ರವೆಂಬ ಹೆಸರು ಪುರಾಣ ಗ್ರಂಥಗಳಲ್ಲಿ ಎಲ್ಲಿಯೂ ಇರುವಂತೆ ತೋರುವುದಿಲ್ಲ. ಇದೇ ಪಾಟಲೀಪುತ್ರವನ್ನೇ ಪದ್ಮವಟಿಯೆಂದು ಕರೆಯುತ್ತಿದ್ದುದಾಗಿ ತಿಳಿಯಬರುತ್ತದೆ. ಮಾಲತೀಮಾಧವದಲ್ಲಿ ಉಜ್ಜಯಿನಿಯ ವಿಚಾರವು ಹೇಳಲ್ಪಟ್ಟಿರುವುದು. ಆದುದರಿಂದ ಪದ್ಮಪುರವು ಉಜ್ಜಯಿನಿ ಎಂಬುದರ ನಾಮಾಂತರವಿರಬಹುದಾಗಿ ತೋರುತ್ತದೆ. ಯಶೋವರ್ಮನು ಕಾನ್ಯಕುಬ್ಜ ಮತ್ತು ಉಜ್ಜಯಿನಿಗೆ ರಾಜನಾಗಿದ್ದುದಾಗಿ ಹೇಳಲ್ಪಟ್ಟಿರುವುದರಿಂದಲೂ, ಉಜ್ಜಯಿನಿಯಲ್ಲಿ ಮಹಾಪ್ರಸಿದ್ಧನಾದ ಕಾಲಪ್ರಿಯಾನಾಥನ ದೇವಾಲಯವಿದ್ದುದಾಗಿ ಕಂಡುಬರುವುದರಿಂದಲೂ, ಮಹಾಕವಿಯಾದ ಬಾಣನು ತಾನು ಬರೆದಿರುವ ಕಾದಂಬರಿಯಲ್ಲಿ ಈ ದೇವಾಲಯವು ಉಜ್ಜಯಿನಿಗೆ ಅಲಂಕಾರವಾಗಿರುವುದಾಗಿ "ಮಹಾಕಾಲಾಭಿಧಾನೇನ.... ಅವಂತಿಷೂಜ್ಜಯಿನೀ ನಾಮ ನಗರೀ" ಎಂದು ಹೇಳಿರುವುದರಿಂದಲೂ, ಭವಭೂತಿಯು ತನ್ನ ಕೃತಿಯೊಂದು ಗ್ರಂಥದಲ್ಲಿಯೂ — ಮಾರಿಷ! ಸುವಿಹಿತಾನಿ ರಂಗಮಂಗಳಾನಿ ಸನ್ನಿಪತಿತಶ್ಚ ಭಗವತಃ ಕಾಲಪ್ರಿಯಾನಾಥಸ್ಯ ಯಾತ್ರಾಪ್ರಸಂಗೇನ" ಎಂದೂ, "ಭಗವತಃ ಕಾಲಪ್ರಿಯಾನಾಥಸ್ಯ ಯಾತ್ರಾಯಾಂ" ಎಂದೂ ಹೇಳಲ್ಪಟ್ಟಿರುವುದರಿಂದ ಭವಭೂತಿಯು ಹೇಳುವ ಪದ್ಮಪುರವು ಉಜ್ಜಯಿನಿಯಾಗಿರಬೇಕೆಂತಲೂ, ಬಾಣನ ಕಾಲಕ್ಕೆ ಉಜ್ಜಯಿನಿಯು ಅವಂತಿದೇಶಕ್ಕೆ ಸೇರಿದುದಾಗಿರಬೇಕೆಂದೂ ಭವಭೂತಿಯ ಕಾಲಕ್ಕೆ ವಿದರ್ಭದೇಶಕ್ಕೆ ಸೇರಿದುದಾಗಿರಬೇಕೆಂದೂ ತಿಳಿಯಬಹುದಾಗಿದೆ.

**ಕಾಲ—** ಭವಭೂತಿಯು ಕಾನ್ಯಕುಬ್ಜದ ಅರಸನಾಗಿದ್ದ ಯಶೋವರ್ಮನ ಆಶ್ರಿತನಾಗಿದ್ದನೆಂದು ಕಲ್ಹಣನ ರಾಜತರಂಗಿಣಿಯು "ಕವಿರ್ವಾಕ್ಪತಿರಾಜಶ್ರೀಭವಭೂತ್ಯಾದಿಸೇವಿತಃ। ಜಿತೋ ಯಯೌ ಯಶೋವರ್ಮಾ ತದ್ಗುಣಸ್ತುತಿವಂದಿತಾಂ" ಎಂಬ ಪದ್ಯದಿಂದ ಸ್ಪಷ್ಟವಾಗುವುದಲ್ಲದೆ ಕಾಶ್ಮೀರದಲ್ಲಿ ಆಳುತ್ತಿದ್ದ ಲಲಿತಾದಿತ್ಯನು ಉಜ್ಜಯಿನಿ ಮತ್ತು ಕಾನ್ಯಕುಬ್ಜಗಳ ಪ್ರಭುವಾದ ಯಶೋವರ್ಮನನ್ನು ಜಯಿಸಿ ಅವನ ಆಸ್ಥಾನಕವಿ

ಯಾದ ಭವಭೂತಿಯನ್ನು ತನ್ನೊಡನೆ ಕರೆದುಕೊಂಡು ಹೋದುದಾಗಿಯೂ ತಿಳಿದುಬರುವುದು. ಯಶೋವರ್ಮನು ಕ್ರಿ. ಶ. ೭೩೦ರಲ್ಲಿದ್ದುದಾಗಿ ತಿಳಿಯುವುದು. ಕಾದಂಬರೀಕಾರನಾದ ಬಾಣನು ಭವಭೂತಿಯನ್ನು ಸ್ಮರಿಸದಿರುವುದರಿಂದ ಭವಭೂತಿಯು ಅವನಿಗಿಂತ ಅರ್ವಾಚೀನನಾಗಿರಬೇಕು. ೮ನೆಯ ಶತಮಾನದವನಾದ ವಾಮನನು ತನ್ನ ಕಾವ್ಯಾಲಂಕಾರ ಸೂತ್ರವೃತ್ತಿಯಲ್ಲಿ ಭವಭೂತಿಯ ಮಹಾವೀರಚರಿತದ ಶ್ಲೋಕಗಳನ್ನು ಉದಾಹರಿಸಿರುವುದರಿಂದ ಅವನಿಗಿಂತ ಮೊದಲಿನವನೋ ಸಮಕಾಲೀನನೋ ಆಗಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಅಷ್ಟುಮಾತ್ರವಲ್ಲದೆ ಭವಭೂತಿಯು ಕುಮಾರಿಲಭಟ್ಟನ ಶಿಷ್ಯನಾಗಿದ್ದನೆಂದೂ ಪ್ರತೀತಿಯಿರುವುದು. ಕುಮಾರಿಲಭಟ್ಟನ ಕಾಲವು ಕ್ರಿ. ಶ. ೮ನೆಯ ಶತಮಾನದ ಪೂರ್ವಾರ್ಧವೆಂದು ತಿಳಿದುಬರುವುದು. ಈ ಎಲ್ಲಾ ಕಾರಣಗಳಿಂದ ಭವಭೂತಿಯು ಕ್ರಿ. ಶ. ೮ನೆಯ ಶತಮಾನದ ಪೂರ್ವಾರ್ಧದಲ್ಲಿದ್ದನೆಂಬುದು ಸ್ಪಷ್ಟವಾಗುವುದು.

ಗ್ರಂಥಗಳು— ಭವಭೂತಿಯು ಮಾಲತೀಮಾಧವ, ಮಹಾವೀರಚರಿತೆ, ಉತ್ತರರಾಮಚರಿತ್ರೆಗಳೆಂಬ ಮೂರು ರೂಪಕಗಳನ್ನು ಬರೆದಿರುವನು. ಆ ಗ್ರಂಥಗಳಲ್ಲಿ ಸ್ಪಷ್ಟವಾಗಿ ತನ್ನ ಹೆಸರನ್ನೂ ಹೇಳಿಕೊಂಡಿರುವನು. ಇವಲ್ಲದೆ ಇವನದೆಂದು "ನಿರವದ್ಯಾನಿಪದ್ಯಾನಿ" ಎಂಬ ಪದ್ಯವು ಶಾರ್ಙ್ಗಧರಪದ್ಧತಿಯಲ್ಲಿಯೂ "ಅಳಿಪಟಲೈರನುಯಾತಾಂ" "ಕಿಂ ಚಂದ್ರಮಾಃ" ಎಂಬ ಪದ್ಯಗಳು ಗದಾಧರನ ರಸಿಕಜೀವನದಲ್ಲಿಯೂ ಕಂಡುಬರುವುದರಿಂದ ಭವಭೂತಿಯು ಬೇರೆ ಯಾವುದನ್ನು ಬರೆದಿರುವನೋ ಇನ್ನೂ ತಿಳಿದಿಲ್ಲ. ಮಾಲತೀಮಾಧವವು ರೂಪಕಭೇದವಾದ ಪ್ರಕರಣ ಜಾತಿಗೆ ಸೇರಿದ ಹತ್ತು ಅಂಕಗಳುಳ್ಳ ಉತ್ತಮವಾದ ಗ್ರಂಥವು. ಅದನ್ನು ಕವಿಯು ಆಗಿನ ಕಾಲದ ನಡೆನುಡಿ ಆಚಾರ ಸಮಾಜಧರ್ಮ ಮೊದಲಾದುವುಗಳೊಡನೆ ಹೊಂದಿಸಿ ಶ್ಲಾಘ್ಯವಾಗುವಂತೆ ಬರೆದಿರುವನು. ಇದು ಶೃಂಗಾರರಸಪ್ರಧಾನವಾದುದು. ಮಹಾವೀರಚರಿತವು ಪೂರ್ವರಾಮಾಯಣದ ಕಥೆಯನ್ನೊಳಗೊಂಡ ವೀರರಸಪ್ರಧಾನವಾದ ನಾಟಕವು. ನಾಟಕದ ಸಂಪ್ರದಾಯಕ್ಕೆ ಅನುಸಾರವಾಗಿ ಪಾತ್ರಗಳಲ್ಲಿ ಉದಾ

ತ್ತತೆಯನ್ನು ತೋರಿಸಬೇಕೆಂಬ ಆಸ್ಥೆಯಿಂದ ಕಥೆಯನ್ನು ತನ್ನ ಜಾಣ್ಮೆ ಯಿಂದ ಬೇಕುಬೇಕಾದಂತೆ ತಿರುಗಿಸಿಕೊಂಡಿರುವನು. ಮೂರನೆಯ ದಾದ ಉತ್ತರರಾಮಚರಿತ್ರೆಯನ್ನೂ ಕವಿಯು ಮಹಾವೀರ ಚರಿತದ ಹಾಗೆಯೇ ಕಥೆಯಲ್ಲಿ ಬೇಕಾದಂತೆ ಹೆಚ್ಚುಕಡಿಮೆಮಾಡಿಕೊಂಡು ಬರೆದಿರುವನು.

ಪ್ರಾಶಸ್ತ್ಯ—ಭವಭೂತಿಯು ಉದ್ದಾಮಪಾಂಡಿತ್ಯವುಳ್ಳ ಮಹಾ ಕವಿಯೆಂಬುದರಲ್ಲಿ ಸಂಶಯವಿಲ್ಲ. ಲಕ್ಷಣಗ್ರಂಥಕಾರರು ಅವನ ಅನೇಕಪದ್ಯಗಳನ್ನು ಉದಾಹರಿಸಿರುವರು. ಅನೇಕಕವಿಗಳು ಅವ ನನ್ನು ಸ್ಮರಿಸಿಕೊಂಡ ರೀತಿಯನ್ನು ಗಮನಿಸಿದರೆ ಅವನ ಯೋಗ್ಯತೆಯು ತಿಳಿಯದೆ ಇರಲಾರದು. ವಾಕ್ಪತಿರಾಜನು ತಾನು ಬರೆದ ಪ್ರಾಕೃತ ಕಾವ್ಯದಲ್ಲಿ—"ಭವಭೂತಿಜಲಧಿನಿರ್ಗತಕಾವ್ಯಾಮೃತರಸಕಣಾ ಇವ ಸ್ಫು ರಂತಿ। ಕಸ್ಯ ವಿಶೇಷಾ ಅದ್ಯಾಪಿ ವಿಕಟೇಷು ಕಥಾನಿವೇಶೇಷು [ಭವಭೂತಿ ಯೆಂಬ ಸಮುದ್ರದಿಂದ ಪ್ರಸೂತವಾದ ಕಾವ್ಯವೆಂಬ ಅಮೃತದ ಬಿಂದು ಗಳಂತೆ ಅವನ ವಿಸ್ತಾರವಾದ ಕಥಾನಿವೇಶಗಳಲ್ಲಿ ಈಗಲೂ ಶೋಭಾ ವಿಶೇಷಗಳು ಎದ್ದು ಕಾಣುತ್ತಿವೆ] ಎಂದು ಶ್ಲಾಘಿಸಿರುವನು. ಬಾಲ ರಾಮಾಯಣವನ್ನು ಬರೆದ ರಾಜಶೇಖರನು "ಬಭೂವ ವಲ್ಮೀಕಭವಃ ಕವಿಃ ಪುರಾ ತತಃ ಪ್ರಪೇದೇ ಭುವಿ ಭರ್ತೃಮೇಂಠತಾಂ। ಸ್ಥಿತಃ ಪುನರ್ಯೋ ಭವಭೂತಿರೇಖಯಾ । ಸ ವರ್ತತೇ ಸಂಪ್ರತಿ ರಾಜ ಶೇಖರಃ" ಎಂಬುದಾಗಿ ತನ್ನನ್ನು ಭವಭೂತಿಯ ಅವತಾರವನ್ನಾಗಿ ಹೇಳಿ ಕೊಂಡಿರುವನು. ಕ್ಷೇಮೇಂದ್ರಕವಿಯು "ಭವಭೂತೇಃ ಶಿಖರಿಣೀ ನಿರ ರ್ಗಲ ತರಂಗಿಣೀ। ರುಚಿರಾ ಘನಸಂದರ್ಭೇ ಯಾ ಮಯೂರೀವ ನೃತ್ಯತಿ" ಎಂದು ಭವಭೂತಿಯ ಶಿಖರಿಣೀವೃತ್ತದ ಪ್ರಾಶಸ್ತ್ಯವನ್ನು ಹೊಗಳಿದ್ದಾನೆ. ಅಷ್ಟುಮಾತ್ರವಲ್ಲದೆ, ಧನಪಾಲನು ತನ್ನ ತಿಲಕಮಂಜರಿಯಲ್ಲಿ "ಸ್ಪಷ್ಟ ಭಾವರಸಾ ಚಿತ್ರೈಃ ಪದನ್ಯಾಸೈಃ ಪ್ರವರ್ತಿತಾ । ನಾಟಕೇಷು ನಟಸ್ತ್ರೀವ ಭಾರತೀ ಭವಭೂತಿನಾ" ಭವಭೂತಿಯ ನಾಟಕಗಳು ಭಾವ ಮತ್ತು ರಸ ಗಳನ್ನು ಸ್ಪಷ್ಟವಾಗಿ ವರ್ಣಿಸುವ ವಿಷಯದಲ್ಲಿ ಮತ್ತು ಲಲಿತಪದಗಳನ್ನು ಜೋಡಿಸುವುದರಲ್ಲಿರುವ ಸೌಂದರ್ಯದ ವಿಷಯದಲ್ಲಿ ಭವಭೂತಿಯನ್ನು

ಈ ರೀತಿ ಶ್ಲಾಘಿಸಿರುವನು. ಹೇಗೆ ವಿಮರ್ಶಿಸಿ ನೋಡಿದರೂ ಭವಭೂತಿಯು ಸಂಸ್ಕೃತಕವಿಲೋಕದಲ್ಲಿ ಭಾಸ, ಕಾಳಿದಾಸ, ಬಾಣ ಮೊದಲಾದ ಮಹಾಕವಿಗಳ ಸಾಲಿನಲ್ಲಿ ಸೇರಿ ಬೆಳಗತಕ್ಕವನೆಂದು ಧಾರಾಳವಾಗಿ ಹೇಳಬಹುದು. ಉತ್ತರರಾಮಚರಿತ್ರೆಯಲ್ಲಿ ಅವನ ಸಾಮರ್ಥ್ಯವು ಇನ್ನೂ ಹೆಚ್ಚಾಗಿರುವುದೆಂದು ತಿಳಿದು ಸಂಸ್ಕೃತವಿದ್ವನ್ಮಣಿಗಳೆಲ್ಲರೂ ಸೇರಿ ಒಮ್ಮತದಿಂದ "ಉತ್ತರೇ ರಾಮಚರಿತೇ ಭವಭೂತಿರ್ವಿಶಿಷ್ಯತೇ" ಎಂದು ಅವನನ್ನು ಕೊಂಡಾಡಿರುವರು. ಗೋವರ್ಧನಾಚಾರ್ಯನಾದರೂ ಅದೇ ಅಭಿಪ್ರಾಯವನ್ನೇ—"ಭವಭೂತೇಸ್ಸಂಬಂಧಾದ್ಭೂಧರಭೂರೇವ ಭಾರತೀ ಭಾತಿ । ಏತತ್ಕೃತಕಾರುಣ್ಯೇ ಕಿಮನ್ಯಥಾ ರೋದಿತಿ ಗ್ರಾವಾ". [ಭವ-ಈಶ್ವರನ. ಭೂತೇಃ-ಸಂಪತ್ತಿನ. ಸಂಬಂಧಾತ್—ಸಂಬಂಧದಿಂದ. ಭೂದರಭೂಃ—ಪಾರ್ವತಿಯು ಯಾವ ರೀತಿ ಪ್ರಕಾಶಿಸುತ್ತಿರುವಳೋ ಅಂತೆಯೇ. ಭವಭೂತೇಸ್ಸಂಬಂಧಾತ್—ಭವಭೂತಿಕವಿಯ ಸಂಬಂಧದಿಂದ. ಭಾರತೀ—ಸರಸ್ವತಿಯು. ಭಾತಿ—ಒಪ್ಪುತ್ತಾಳೆ. ಏತತ್ಕೃತಕಾರುಣ್ಯೇ—ಈಶ್ವರಕೃತವಾದ ಕರುಣೆಯಲ್ಲಿ ಎಂದರೆ ದಕ್ಷಾಧ್ವರದಲ್ಲಿ ಪಾರ್ವತೀದೇವಿಯು ಅಗ್ನಿಕುಂಡದಲ್ಲಿ ದೇಹವನ್ನು ಬಿಟ್ಟಕಾಲಕ್ಕೆ ಹೇಗೋ ಹಾಗೆಯೇ ಭವಭೂತಿಯಿಂದ ಕಲ್ಪಿತವಾದ ಕರುಣರಸಪ್ರಧಾನವಾದ ಈ ನಾಟಕದಲ್ಲಿ "ಅಪಿ ಗ್ರಾವಾ ರೋದಿತ್ಯಪಿದಳತಿ ವಜ್ರಸ್ಯ ಹೃದಯಂ" ಎಂಬ ಹಾಗೆ ಸೀತಾವಿಯೋಗಸಂತಪ್ತನಾದ ಶ್ರೀರಾಮಚಂದ್ರನ ಶೋಕದಲ್ಲಿ ಕಲ್ಲೂ ಕರಗಿ ನೀರಾಗಿ ಹೋಗುವುದು ಒಂದಾಶ್ಚರ್ಯವಲ್ಲ] ಎಂದು ಹೇಳಿಕೊಂಡು ಭವಭೂತಿಯ ಮೇಲಿರುವ ತನ್ನ ವಿಶ್ವಾಸವನ್ನು ತಿಳಿಸಿಕೊಂಡಿರುವನು.

ಪಾಶ್ಚಾತ್ಯವಿಮರ್ಶಕರೂ ಕೂಡ, ನಾಟಕರಚನೆಯಲ್ಲಿ ಮತ್ತು ಕವಿತೆಯಲ್ಲಿ ಭವಭೂತಿಗಿರುವ ಉನ್ನತಸ್ಥಾನವನ್ನು ಕೊಂಡಾಡಿದ್ದಾರೆ. ಪ್ರೊಫೆಸರ್—ವಿಲ್ಸನರು ಅವನ ಮಾಲತೀಮಾಧವದಲ್ಲಿ ಅನಿತರಸಾಧಾರಣವಾದ ಸೌಂದರ್ಯವನ್ನೂ ಶಕ್ತಿಯನ್ನೂ ಕಾಣುತ್ತಾರೆ. ಕರುಣರಸವನ್ನು ವರ್ಣಿಸುವ ಕಲೆಯಲ್ಲಿ ಅವನು ಪ್ರತಿಸ್ಪರ್ಧಿಯಿಲ್ಲದ ಅತ್ಯುತ್ಕೃಷ್ಟಕವಿಯೆಂದು ಹೇಳಬಹುದು. ಉತ್ತರರಾಮಚರಿತ್ರೆಯನ್ನು ಪರಿಶೀಲಿಸಿದರೆ ಸೀತೆಯನ್ನು ವರ್ಣಿಸಲು ಅವನು ಉಪಯೋಗಿಸಿದ

"ಕರುಣಸ್ಯಮೂರ್ತಿರಥವಾ ಶರೀರಿಣೀ" ಎಂಬ ಪದ್ಯಭಾಗವು ಅವನ ಸ್ವಂತ ವಾದ ಕವಿತಾಶಕ್ತಿಯ ವರ್ಣನೆಗೂ ಅನ್ವಯಿಸಬಹುದಾಗಿದೆ. ಮಾಲತೀಮಾಧವದಲ್ಲಿ ಅವನ ಕಲ್ಪನಾಶಕ್ತಿಯನ್ನು ಉತ್ತಮರೀತಿಯಲ್ಲಿ ನಾವು ಪ್ರತ್ಯಕ್ಷೀಕರಿಸುತ್ತೇವೆ. ಸಂದರ್ಭಗಳ ವೈವಿಧ್ಯ ರಭಸದಿಂದ ಚಲಿಸುವ ಅಭಿನಯ ಇವುಗಳ ದೆಸೆಯಿಂದ ಬುದ್ಧಿಪ್ರಭಾವವು ವಿಸ್ತರಿಸುವುದಕ್ಕೆ ಅದರಲ್ಲಿ ಸಾಕಷ್ಟು ಅವಕಾಶವಿರುತ್ತದೆ. ಪ್ರೀತಿಯನ್ನು ವರ್ಣಿಸುವ ಸಂದರ್ಭದಲ್ಲಿ ಕೋಗಿಲೆಗಳ ಗಾನ, ಚೂತಪಲ್ಲವ ಮೊದಲಾದುವುಗಳನ್ನು ವರ್ಣಿಸುವ ಸಂಪ್ರದಾಯಗಳನ್ನೂ ಭವಭೂತಿಯು ಕಡೆಗಣಿಸುತ್ತಾನೆ. ವಿಸ್ತಾರವಾದ ಅರಣ್ಯಗಳ, ದೊಡ್ಡ ಪರ್ವತಪ್ರದೇಶಗಳ, ಜೋಗಗಳ, ಹಾಗೂ ಚಿತ್ತವಿಕಾಸಕದೃಶ್ಯಗಳ ಚಿತ್ತಾಕರ್ಷಕ ವರ್ಣನೆಗಳನ್ನು ಮಾಡಿದ ಕೆಲವೇ ಕವಿಗಳಲ್ಲಿ ಭವಭೂತಿಯೊಬ್ಬನು. ಪ್ರಕೃತಿವರ್ಣನೆಯಲ್ಲಿ ಕಾಳಿದಾಸನು ಅಗ್ರಗಣ್ಯನೆಂದು ಸರ್ವರೂ ಒಪ್ಪಿಕೊಂಡ ವಿಷಯ. ಆದರೆ ಅವನ ಕವಿತಾಶಕ್ತಿಯೆಂಬ ದೇವತೆಯು ಪ್ರಕೃತಿಯ ಸೌಮ್ಯವಾದ ಅಂಶಗಳಲ್ಲಿ ವಾಸಮಾಡುತ್ತದೆ. ಗಂಭೀರವಾದ ಮತ್ತು ಉಜ್ವಲವಾದ ದೃಶ್ಯಗಳ ಅನುರೂಪವಾದ ವರ್ಣನೆಗೆ ನಾವು ಭವಭೂತಿಯನ್ನೇ ಶರಣೆನ್ನಬೇಕು. ಭವಭೂತಿಯ ಶೈಲಿಯು ಬಹಳ ಸುಂದರವಾದುದು. ಅವನಿಗೆ ಭಾಷೆಯಲ್ಲಿ ಅದ್ಭುತವಾದ ಸ್ವಾಯತ್ತತೆ ಇರುವುದು. ಅರ್ಥಕ್ಕೆ ಸರಿಯಾಗಿ ಪ್ರತಿಧ್ವನಿಕೊಡುವ ಶಬ್ದಗಳನ್ನು ಪೋಣಿಸುವುದರಲ್ಲಿ ಅವನು ಅಸಮಾನನು. ಅವನ ನಾಟಕಗಳಲ್ಲಿರುವ ಘನತೆಯು ಅವನ ಭಾಷೆಯ ವಿಷಯದ ಹೊರತು ಅವುಗಳಲ್ಲಿರುವ ಪಾತ್ರಗಳ ನೈತಿಕವಾದ ಔಚಿತ್ಯವನ್ನು ಅವಲಂಬಿಸಿರುತ್ತದೆ. ಸಾಮಾನ್ಯಜನರ ಅನುರಾಗವನ್ನು ವರ್ಣಿಸುವ ಸಂದರ್ಭದಲ್ಲಿ ಸಹ ಭವಭೂತಿಯು ವಿಷಯಾಸಕ್ತಿಯನ್ನು ತೋರ್ಪಡಿಸಿಕೊಳ್ಳಲು ಪ್ರವರ್ತಿಸುವುದಿಲ್ಲ. ಕೇವಲ ಕಾಮಾಂಧತೆಯ ವರ್ಣನೆಯ ಮಟ್ಟಕ್ಕೆ ಇಳಿಯದೆ ಅವನು ಶೃಂಗಾರರಸದ ಆಳದ ವರೆಗೆ ಹೋಗುವನು. ಅವನು ತನ್ನ ಕೃತಿಗಳಲ್ಲೆಲ್ಲಿಯೂ ಗಾಂಭೀರ್ಯದಿಂದಲೇ ಕಾಣಲ್ಪಡುತ್ತಾನೆ. ಅವನ ಶೃಂಗಾರನಾಯಕನು ತನ್ನತನವನ್ನು ಸಂಪೂರ್ಣವಾಗಿ ಅಳಿಸಿ

ಕೊಂಡ ಆದರ್ಶಪ್ರಾಯನು. ಅವನು ವರ್ಣಿಸುವ ಅರಸನು ಜನತೆ ಗಾಗಿ ತನ್ನ ಸರ್ವಸ್ವವನ್ನೂ ಆಹುತಿಗೊಡಲು ಸಿದ್ಧನಾಗಿರುವುದರಿಂದ ಸರ್ವರಿಗೂ ಬೇಕಾದವನು. ಇಂತಹ ಆದರ್ಶತೆಗಳ ಮೂಲಕ ಭವ ಭೂತಿಯು ಸಾಹಿತ್ಯಲೋಕದಲ್ಲಿ ಚಿರಸಂಸ್ಮರಣೀಯನೇ ಸರಿ.

**ಉತ್ತರರಾಮಚರಿತ್ರೆಯ ಮೂಲವೂ ಕವಿಕಲ್ಪಿತವಾದ ವ್ಯತ್ಯಾಸವೂ**— ಭವಭೂತಿಯು ಯಾವುದನ್ನು ತಳಹದಿಯನ್ನಾಗಿ ಇಟ್ಟುಕೊಂಡು ತನ್ನ ಗ್ರಂಥವನ್ನು ಬರೆದನೋ ಆ ವಾಲ್ಮೀಕಿರಾಮಾ ಯಣವು ಜನಸಾಮಾನ್ಯರಿಗೂ ವಿದಿತವಾಗಿ ವಿಶ್ವಗೌರವಕ್ಕೆ ಪಾತ್ರವಾಗಿ ರುತ್ತದೆ. ನಾಟಕದಲ್ಲಿರುವ ಕಥಾವೃತ್ತಾಂತವು ರಾಮಾಯಣದ ಕೊ ನೆಯ ಕಾಂಡದಲ್ಲಿರುತ್ತದೆ. ಆದರೆ ಇಲ್ಲಿ ನಾಟಕದ ಯೋಗ್ಯತೆಗೆ ಬೇಕಾ ದಂತೆ ಕೆಲವು ಬದಲಾವಣೆಗಳು ಮಾಡಲಾಗಿವೆ. ಉತ್ತರರಾಮಚರಿ ತ್ರೆಯು ಮಹಾವೀರಚರಿತ್ರೆಯ ಉತ್ತರಭಾಗದಂತಿದ್ದು ಅವೆರಡೂ ಸೇರಿ ದರೆ ರಾಮಕಥೆಯು ನಾಟಕರೂಪದ ಸಂಗ್ರಹವೆನ್ನಬಹುದಾಗಿದೆ. ಜನ ಸಾಮಾನ್ಯರಿಗೂ ರಾಮಾಯಣಕಥೆಯು ಪರಿಚಿತವೇ ಆಗಿರುವುದರಿಂದ ಅದರ ಸಾರವನ್ನು ಇಲ್ಲಿ ಕೊಡಬೇಕಾದ ಅಗತ್ಯವಿಲ್ಲ. ಕವಿಯು ನಾಟ ಕದ ಯಾವ ಯಾವ ಅಂಶಗಳಲ್ಲಿ ಹೇಗೆ ಹೇಗೆ ವ್ಯತ್ಯಾಸಪಡಿಸಿರುತ್ತಾನೆ ಮತ್ತು ಹಾಗೆ ಮಾಡುವುದರಲ್ಲಿರುವ ಔಚಿತ್ಯವೇನು ಎಂಬುದನ್ನು ನಾವು ಪರೀಕ್ಷಿಸಿದರೆ ಸಾಕು.

ಭವಭೂತಿಯು ಬಹುಪ್ರಾಮುಖ್ಯವಾದ ಒಂದು ವ್ಯತ್ಯಾಸವನ್ನೂ ಮತ್ತು ಕೆಲವು ಸಣ್ಣ ಸಣ್ಣ ಬದಲಾವಣೆಗಳನ್ನೂ ಮಾಡಿರುತ್ತಾನೆ. ಮೂಲ ಕಥೆಯ ಅವಸಾನವು ದುಃಖಾಂತವಾಗಿದೆ. ಅದರಲ್ಲಿ ಸೀತೆಯು ಭೂ ದೇವಿಯಿಂದ ರಸಾತಳಕ್ಕೆ ಒಯ್ಯಲ್ಪಟ್ಟಂತೆಯೂ ಕೂಡಲೆ ಶ್ರೀರಾಮನು ತನ್ನ ಭೂಲೋಕದ ಅವತಾರವನ್ನು ಕೊನೆಗಾಣಿಸಿದುದಾಗಿಯೂ ವರ್ಣಿತ ವಾಗಿದೆ. ಆದರೆ ನಾಟಕವು ದುಃಖಾಂತವಾಗಿರಕೂಡದು ಎಂಬ ಸಂಸ್ಕೃತ ನಾಟ್ಯಶಾಸ್ತ್ರದ ಸಂಪ್ರದಾಯವನ್ನು ಅನುಸರಿಸಿ ಕವಿಯು ಮೂಲಕಥೆ ಯನ್ನು ವ್ಯತ್ಯಾಸಪಡಿಸಿ ದುಃಖಮಯವಾದ ಅತಿದೀರ್ಘವಿಯೋಗದ ಅನಂತರ ರಾಮ ಸೀತೆ ಮತ್ತು ಅವರ ಮಕ್ಕಳ ಪರಸ್ಪರ ಸುಖಮಯ

ವಾದ ಸಮಾಗಮದೊಡನೆ ತನ್ನ ಕೃತಿಯನ್ನು ಕೊನೆಗೊಳಿಸುತ್ತಾನೆ. ರಾಮಾಯಣವು ರಾಮನಿಗೂ ಅವನ ಮಕ್ಕಳಿಗೂ ಪರಸ್ಪರ ಯುದ್ಧವು ಜರುಗಿ ರಾಮನು ಸೋತು ಹೋದ ಹಾಗೆ ವರ್ಣಿಸುತ್ತದೆ. ಆದರೆ ಭವಭೂತಿಯು ತನ್ನ ಉದಾತ್ತನಾಯಕನು ತನ್ನ ಮಕ್ಕಳಿಂದ ಯುದ್ಧದಲ್ಲಿ ಸೋತನೆಂಬುದನ್ನು ವರ್ಣಿಸಲು ಇಚ್ಛಿಸುವುದಿಲ್ಲ. ಆದುದರಿಂದ ಸಮಾನವಯಸ್ಕರೂ ಸಮಾನಯೋಗ್ಯತೆಯುಳ್ಳವರೂ ಆದ ಚಂದ್ರಕೇತು ಲವರೊಳಗೆ ಆ ಯುದ್ಧವು ಸಮನಿಸುವಂತೆ ಕಥೆಯನ್ನು ಹೆಣೆದಿರುತ್ತಾನೆ. ದಂಡಕಾರಣ್ಯದಲ್ಲಿ ಅದೃಶ್ಯಳಾಗಿದ್ದ ಸೀತೆಯೊಡನೆ ಮತ್ತು ವನದೇವತೆಯಾದ ವಾಸಂತಿಯೊಡನೆ ನಡೆಯುವ ಭೇಟಿಗಳನ್ನು ಕವಿಯು ಹೊಸತಾಗಿ ಕಲ್ಪಿಸಿರುವನು. ಇದು ಪ್ರಿಯಾವಿರಹದುಃಖಿತನಾದ ನಾಯಕನ ಶೋಕಭಾರವನ್ನು ವರ್ಣಿಸುವುದಕ್ಕೂ ನಾಯಕನಾಯಿಕೆಯರ ಪರಸ್ಪರವಾದ ಪ್ರೇಮವು ದೃಢಮೂಲವಾಗಿ ನಿಶ್ಚಲವಾಗಿತ್ತೆಂಬುದನ್ನು ಪ್ರಕಟಪಡಿಸುವುದಕ್ಕೂ ಕವಿಗೆ ಒಂದು ಆಸ್ಪದವನ್ನು ಮಾಡಿಕೊಟ್ಟಿತು. ವಸಿಷ್ಠಾರುಂಧತಿಯರ ಮತ್ತು ರಾಮಮಾತೆಯರ ಯಾಗಸಂದರ್ಶನವು ಮೂಲದಲ್ಲಿ ಕಾಣುವುದಿಲ್ಲ; ಆದರೆ ಕವಿಯು ತಾನು ನೆನಸಿದಂತೆ ಕಥೆಯು ಕೊನೆಗೊಳ್ಳಲು ಇದನ್ನು ಹೊಸತಾಗಿ ಕಲ್ಪಿಸಿಕೊಂಡನು.

ಈ ನಾಟಕದಲ್ಲಿ ಆದ್ಯಂತವಾಗಿ ವಾಲ್ಮೀಕಿರಾಮಾಯಣದ ಪ್ರಭಾವವು ಸಮೃದ್ಧವಾಗಿ ಕಂಡುಬರುತ್ತಿದೆ. ಕೆಲವು ಕಡೆ ಅದರಿಂದಲೇ ಉದ್ಧೃತವಾದ ಭಾಗಗಳೂ ಕಾಣುತ್ತವೆ. ಆದುದರಿಂದ ನಾಟಕಬರೆಯುವಾಗ ರಾಮಾಯಣವು ಕವಿಯ ಮುಂದೆ ನಿಸ್ಸಂದೇಹವಾಗಿಯೂ ಇದ್ದಿರಬೇಕು. ಆದರೆ ಕವಿಯು ನಾಟಕಕ್ಕಾಗಿ ಉಪಯೋಗಿಸಿದ ರಾಮಾಯಣ ಕಥೆಯು ಈಗ ದೊರೆಯುವ ವಾಲ್ಮೀಕಿರಾಮಾಯಣಗ್ರಂಥದ ಪ್ರತಿಯಿಂದ ಅಧಿಕಾಂಶವುಳ್ಳ ಪ್ರತಿಯಾಗಿದ್ದಿರಬಹುದೇ ಎಂಬ ಪ್ರಶ್ನೆಯು ಸಹಜವಾಗಿ ಉದಯಿಸುತ್ತಿದೆ. ಪದ್ಮಪುರಾಣದಲ್ಲಿ ರಾಮಕಥೆಯು ಮೂರೆಡೆಗಳಲ್ಲಿ ಕೊಡಲ್ಪಟ್ಟಿದೆ. ಪಾತಾಳಖಂಡದಲ್ಲಿರುವ ಪಾಠಾಂತರದ ಪ್ರಕಾರ ಉತ್ತರರಾಮಚರಿತ್ರೆಯ ನಾಲ್ಕರಿಂದ ಆರು ಅಂಕಗಳಲ್ಲಿರುವ ಕಥೆಯು ಅದರೊಡನೆ ಬಹಳ ಹೋಲಿಕೆಯುಳ್ಳುದಾಗಿದೆ. ಪದ್ಮಪುರಾಣ

ದಲ್ಲಿ ಕಾಳಿದಾಸನ ರಘುವಂಶ ಶಾಕುಂತಲಗಳ ನಿಕಟ ಸಾಮ್ಯವಿರುವ ಕೆಲವು ಭಾಗಗಳು ಕಾಣುತ್ತವೆ. ಅವುಗಳು ಹಿಂದೂದೇಶದ ಕೀರ್ತಿವಂತಕವಿಕಾಳಿದಾಸನ ಕೃತಿಗಳ ಪರಿಚಯವುಳ್ಳ ಮತ್ತು ಅವುಗಳನ್ನು ಚೆನ್ನಾಗಿ ಮೆಚ್ಚಿದ ಯಾವನೋ ಒಬ್ಬನ ಕೈಚಳಕವಾಗಿರಬಹುದೆಂದೂ ತೋರುತ್ತದೆ. ಮತ್ತು ಈಗ ದೊರೆಯುವ ಪದ್ಮಪುರಾಣವು ಭವಭೂತಿಯಿಂದ ಪ್ರಾಚೀನವಾದುದೆಂಬುದಕ್ಕೆ ಸಾಕಷ್ಟು ಆಧಾರವು ದೊರೆಯುವವರೆಗೆ ಉತ್ತರರಾಮಚರಿತ್ರೆಗೆ ಪದ್ಮಪುರಾಣವು ಆಧಾರವಾಗಿರಬೇಕೆಂದು ಅಂಗೀಕರಿಸಿಕೊಳ್ಳುವುದು ಸಮಂಜಸವಾಗಿ ತೋರುವುದಿಲ್ಲ. ಅಥವಾ ಹಿಂದೂದೇಶದಲ್ಲಿ ಶತಕೋಟಿರಾಮಾಯಣಗಳು ಪ್ರಚಾರದಲ್ಲಿದ್ದಂತೆ ಭವಭೂತಿಯು ಈ ರಾಮಚರಿತ್ರೆಯಲ್ಲಿ ವ್ಯತ್ಯಾಸಗಳನ್ನು ತಾನೇ ಕಲ್ಪಿಸಿರಲೂ ಬಹುದಲ್ಲವೆ?

ದಶರೂಪಕಗಳಲ್ಲಿ ಉತ್ತರರಾಮಚರಿತ್ರೆಯು—ಇದು ಬಹುಪ್ರಖ್ಯಾತನಾಟಕಗಳ ಸಾಲಿಗೆಸೇರಿದ್ದಾಗಿರುತ್ತದೆ. ಇದರಲ್ಲಿ ಪ್ರಖ್ಯಾತವಾದ ಐತಿಹಾಸಿಕಕಥಾವಸ್ತುವು; ಧೀರೋದಾತ್ತನಾಯಕನು; ಸ್ವೀಯಾನಾಯಿಕೆಯು. ಆದರೆ ಬೇರೆ ಕೆಲವು ನಾಟಕಗಳಲ್ಲಿ ಇರುವಂತೆ ಇಲ್ಲಿ ಪ್ರತಿನಾಯಕಪ್ರತಿನಾಯಿಕೆಯರು ಇರುವುದಿಲ್ಲ. ಸಂದರ್ಭೋಚಿತವಾಗಿ ವೀರಶೃಂಗಾರಗಳಿಂದ ಕೂಡಿದ ಕರುಣರಸವು ಪ್ರಧಾನವಾಗಿ ಪ್ರತಿಪಾದಿತವಾಗಿರುವುದು. ಇದರಲ್ಲಿ ಸಂಪ್ರದಾಯಾನುಸಾರವಾಗಿ ನಿಬದ್ಧವಾದ ನಾಂದಿಯು ದ್ವಾದಶಪದಗಳುಳ್ಳದ್ದಾಗಿದೆ. ಬಳಿಕ ಪ್ರಸ್ತಾವನೆಯಲ್ಲಿ ಸೂತ್ರಧಾರನು ನಾಟಕದ ಹೆಸರನ್ನು ಸಾಮಾಜಿಕರಿಗೆ ತಿಳಿಸಿ ಕವಿಯ ವಿಷಯವಾದ ಕೆಲವು ಸಂಗತಿಗಳನ್ನೂ ಕಥಾಭಾಗದ ಸೂಚನಾರೂಪವಾದ ಉಪೋದ್ಘಾತಭಾಗಗಳನ್ನೂ ತಿಳಿಸಿದ ಬಳಿಕ ರಾಮನು ಸೀತೆಯನ್ನು ಸಾಂತ್ವನಗೊಳಿಸುವನೆಂಬ ಕಥಾರಂಭವು ರಂಗದ ಮುಂದೆ ಬರುವುದು. ಆ ಮೇಲೆ ಮೂರು ಅಂಕಗಳಲ್ಲಿಯೂ, ಪ್ರತಿಯೊಂದು ಅಂಕವು ಕಳೆದ ಬಳಿಕ ಬೇರೊಂದು ಅಂಕವು ಪ್ರಾರಂಭವಾಗುವುದಕ್ಕಿಂತ ಮೊದಲು ಅಂತರಾಳ ಕಾಲದಲ್ಲಿ ನಡೆದ ಸಂಭವಗಳ ಪರಿಚಯವನ್ನು ಸಾಮಾಜಿಕರಿಗೆ ಮಾಡಿಕೊಡುವುದೇ ಉದ್ದೇಶವಾಗಿರುವ ವಿಷ್ಕಂಭಕವಿರುವುದು. ನಾಲ್ಕನೆಯ

ಅಂಕದ ಬಳಿಕ ಏನೂ ಕಾಲವ್ಯವಧಾನವಿಲ್ಲದೆ ಆರಂಭವಾಗುವ ಕಥಾವಸ್ತುವುಳ್ಳ ಐದನೆಯ ಅಂಕದಲ್ಲಿ ವಿಷ್ಕಂಭವಿರುವುದಿಲ್ಲ. ಆರನೆಯ ಅಂಕದಲ್ಲಿ ಪುನಃ ಅದು ಸ್ಥಾನವನ್ನು ಪಡೆಕೊಂಡಿದೆ. ಏಳನೆಯ ಅಂಕದಲ್ಲಿ ಅದು ಮಾಡಬೇಕಾಗಿದ್ದ ಕೆಲಸವನ್ನು ಅಂಕದ ಆದಿಯಲ್ಲಿರುವ ಲಕ್ಷ್ಮಣನ ದೀರ್ಘವಾದ ವಚನವೇ ನಿರ್ವಹಿಸುತ್ತದೆ. ಏಳನೆಯ ಅಂಕದಲ್ಲಿ ವಿಶೇಷವಾಗಿ ಅಂತರ್ನಾಟಕೆಯೊಂದಿದೆ. ಅದು "ಪ್ರೇಕ್ಷಣಕ"ವೆಂಬ ಏಕಾಂಕರೂಪಕದ ಪ್ರಭೇದಕ್ಕೆ ಸೇರುತ್ತದೆ. ಕೊನೆಗೆ ಸಂಪ್ರದಾಯಾನುಸಾರವಾದ ಭರತವಾಕ್ಯವಿದೆ.

**ನಾಟಕದ ಕಥೆಯಲ್ಲಿ ಕಾಲಗಣನೆಯ ವಿಚಾರ**— ಉತ್ತರರಾಮಚರಿತ್ರೆಯ ಕಥಾಭಾಗವು ಸಮಾರು ಹನ್ನೆರಡು ವರುಷಗಳ ಕಾಲದ ಅವಧಿಯನ್ನು ವ್ಯಾಪಿಸಿಕೊಂಡಿದೆ. ಸೀತೆಯು ತುಂಬಿದ ಬಸುರಿಯಾಗಿದ್ದಾಗ, ಋಷ್ಯಶೃಂಗನು ಆರಂಭಿಸಿದ ಹನ್ನೆರಡು ವರುಷಗಳಲ್ಲಿ ಕೊನೆಗೊಳ್ಳುವ ಯಾಗಕ್ಕಾಗಿ ಹಿರಿಯರು ಅಯೋಧ್ಯೆಯನ್ನು ಬಿಟ್ಟು ಅವನ ಆಶ್ರಮಕ್ಕೂ ಜನಕನು ಅಯೋಧ್ಯೆಯನ್ನು ಬಿಟ್ಟು ವಿದೇಹಕ್ಕೂ ಹೋದ ಬಳಿಕ ಒಂದು ದಿನ ಅಪರಾಹ್ನದಲ್ಲಿ ಮೊದಲನೆಯ ಅಂಕವು ಪ್ರಾರಂಭವಾಗುತ್ತದೆ. ಸೀತೆಯು ಗುರುಹಿರಿಯರ ಹಾಗೂ ಜನಕನ ಗಮನದಿಂದ ವ್ಯಸನಪಡುತ್ತಿರುವಂತೆಯೂ ರಾಮನು ಅವಳನ್ನು ಸಂತೈಸುವುದಕ್ಕಾಗಿ ಮಧ್ಯಾಹ್ನದ ಮೇಲೆ ಧರ್ಮಾಸನವನ್ನು ಬಿಟ್ಟು ಅಂತಃಪುರಕ್ಕೆ ಬಂದ ಹಾಗೂ ವರ್ಣಿತವಾಗಿದೆ. ಆ ಅಂಕದ ಕೊನೆಯಲ್ಲಿ ರಾಮನ ಅಪ್ಪಣೆಯ ಮೇರೆಗೆ ತನ್ನನ್ನು ಕಾಡಿನಲ್ಲಿ ಪರಿತ್ಯಾಗಮಾಡಿ ಬರಲಿರುವ ಲಕ್ಷ್ಮಣನೊಂದಿಗೆ ಸೀತೆಯು ಹೊರಡುವಳು. ಮೊದಲನೆಯ ಮತ್ತು ಎರಡನೆಯ ಅಂಕಗಳ ಮಧ್ಯದಲ್ಲಿ ಸುಮಾರು ಹನ್ನೆರಡು ವರುಷ ಮೂರು ತಿಂಗಳುಗಳ ಅಂತರವಿರುವುದೆಂದು "ಹನ್ನೆರಡು ವರುಷಗಳಿಂದ ಮುಗಿಯತಕ್ಕ ಆ ಯಜ್ಞವು ಈಗ ಪೂರ್ತಿಯಾಗಿರುವುದು" ಎಂದು ಹೇಳಿದ ಆತ್ರೇಯಿಯಾವಚನದಿಂದ ತಿಳಿಯಬಹುದಾಗಿದೆ. ಮೂರನೆಯ ಅಂಕದ ಕಥಾರಂಭದಲ್ಲಿ ಪರಿತ್ಯಾಗದ ಬಳಿಕ ಸೀತೆಯು ಪಡೆದ ಅವಳಿಮಕ್ಕಳಿಗೆ ಹನ್ನೆರಡನೆಯ ವರುಷದ ಜನ್ಮೋತ್ಸವವು ನೆರವೇರಬೇಕಾಗಿದೆಯೆಂದು ತಿಳಿಯುವುದು. ಎರಡನೆಯ ಅಂಕದ

ಸಮಯವು ಪೂರ್ವಾಹ್ನದ ಪ್ರಾತಃಕಾಲವಾಗಿರಬಹುದೆಂದೂ, ಮೂರನೆಯ ಅಂಕದ ಕಾಲವು ಅದೇ ದಿನದ ಅಪರಾಹ್ನಕ್ಕೆ ಸೇರಿದುದಾಗಿರಬಹುದೆಂದೂ ತೋರುತ್ತದೆ. ಮೂರನೆಯ ಅಂಕಕ್ಕೂ ನಾಲ್ಕನೆಯ ಅಂಕಕ್ಕೂ ಮಧ್ಯದಲ್ಲಿ ಒಂದು ದಿನಕ್ಕಿಂತ ದೀರ್ಘಸಮಯದ ವ್ಯವಧಾನವಿರಲಾರದೆಂದು ಊಹಿಸಲು ಅವಕಾಶವಿದೆ. ಯಾಕೆಂದರೆ, ಆರನೆಯ ಅಂಕದ ವಿಷ್ಕಂಭದಲ್ಲಿ ರಾಮನು ತಾನೇ ಚಂದ್ರಕೇತುಲವರೊಳಗೆ ನಡೆಯುತ್ತಿದ್ದ ಯುದ್ಧವನ್ನು ತಡೆದುದಾಗಿ ವರ್ಣಿಸಿದೆ. ರಾಮನು ಅಗಸ್ತ್ಯಾಶ್ರಮದಲ್ಲಿ ಒಂದು ದಿನಕ್ಕಿಂತ ಹೆಚ್ಚು ಸಮಯ ಕಳೆದಿರಲು ಸಾಧ್ಯವಿಲ್ಲ. ವಸಿಷ್ಠ ಅರುಂಧತಿ ಕೌಸಲ್ಯೆ ಮೊದಲಾದ ಹಿರಿಯರು ವಾಲ್ಮೀಕಿಯ ಸಂದರ್ಶನವನ್ನು ಮಾಡಿದ ನಂತರ ಅದೇ ದಿನವೇ ಐದನೆಯ ಅಂಕವು ಪ್ರಾರಂಭವಾಗುತ್ತದೆ. ಅದು ನಾಲ್ಕನೆಯ ಅಂಕದ ಅನುಸ್ಯೂತವಾದ ಕಥೆಯೇ ಆಗಿದೆ. ಅವೆರಡು ಅಂಕಗಳ ಮಧ್ಯದಲ್ಲಿ ಹೆಚ್ಚು ಕಡಿಮೆ ಒಂದು ಘಂಟೆಯಿಂದ ಮೇಲಿನ ವ್ಯವಧಾನವಿರಲಾರದು. ಆರನೆಯ ಅಂಕದ ಕಥೆಯು ಐದನೆಯ ಅಂಕದ ಬಳಿಕ ಸ್ವಲ್ಪವೂ ಸಮಯವಿಳಂಬವಿಲ್ಲದೆ ಆರಂಭವಾಗುತ್ತದೆ. ಯಾಕೆಂದರೆ, ಚಂದ್ರಕೇತುಲವರೊಳಗೆ ನಡೆಯುವ ಪ್ರಚಂಡವಾದ ಯುದ್ಧವನ್ನು ವಿದ್ಯಾಧರನೊಬ್ಬನು ತನ್ನ ಪ್ರಿಯೆಯೊಡನೆ ಪ್ರತ್ಯಕ್ಷೀಕರಿಸುತ್ತಿರುವ ನೋಟವು ಅದರ ಆರಂಭದಲ್ಲಿರುವುದು. ಏಳನೆಯ ಅಂಕವು ಹೆಚ್ಚಿನ ಮಟ್ಟಿಗೂ ಮರುದಿನ ಆರಂಭವಾದುದಿರಬೇಕು. ಆರನೆಯ ಅಂಕದಲ್ಲಿ ಶ್ರೀರಾಮನು ಕುಶಲವರ ಮುಂದೆ ಉಪಸ್ಥಾಪಿತನಾಗುವನು. ಆ ಮೇಲೆ ವಾಲ್ಮೀಕಿಯಿಂದ ವಿವರಗಳನ್ನು ತಿಳಕೊಳ್ಳಲು ಹೆಚ್ಚು ಸಮಯ ಕಳೆಯಲು ಸಾಧ್ಯವಿಲ್ಲ. ಅಂಕಗಳಲ್ಲಿ ಕಾಲದ ಅಥವಾ ತಿಂಗಳುಗಳ ವಿಷಯವಾಗಿ ಕವಿಯು ಸ್ವೋಕ್ತಿಯಿಂದ ಹೆಚ್ಚಿನ ವಿವರಗಳನ್ನು ತಿಳಿಸದಿರುವುದರಿಂದ ಕಾಲದ ತೀರ್ಮಾನವನ್ನು ಇದಕ್ಕಿಂತ ಹೆಚ್ಚು ಹೀಗೆಯೇ ಸರಿಯೆಂದು ನಿರ್ಧರಿಸಿ ಹೇಳುವುದು ಸುಲಭಸಾಧ್ಯವಲ್ಲ.

ಉತ್ತರರಾಮಚರಿತ್ರೆಯ ಕಥಾಸಂವಿಧಾನ — ಭಾರತೀಯರ ಸಾಹಿತ್ಯಕ್ಷೇತ್ರದಲ್ಲಿ ಉತ್ತರರಾಮಚರಿತ್ರೆಯು ಅತ್ಯುನ್ನತಸ್ಥಾನವನ್ನು

ಗಳಿಸಿಕೊಂಡಿದೆ. ಇದು ಭವಭೂತಿಯ ಆದರ್ಶಕೃತಿಯೆಂದು ಸರ್ವರೂ ಒಪ್ಪಿಕೊಂಡ ವಿಷಯವಾಗಿದೆ. ಉತ್ತಮ ನಾಟಕಕಾರನಲ್ಲಿರತಕ್ಕ ಜಾಗೃತವಾದ ಊಹಾಶಕ್ತಿ, ಸಮೃದ್ಧವಾದ ಭಾವನೆ, ಸುಂದರಗಳಾಗಿ ಉತ್ಕೃಷ್ಟಗಳಾದ ವಸ್ತುಗಳನ್ನು ಮೆಚ್ಚುವ ಗುಣ, ಪಾತ್ರರಚನಾಕೌಶಲ, ಮನುಷ್ಯನ ಹೃದಯದಲ್ಲಿ ನಡೆಯುವ ಕ್ರಿಯಾಸಂತತಿಯ ಸಂಪೂರ್ಣವಾದ ಜ್ಞಾನ ಮತ್ತು ಕಷ್ಟದಲ್ಲಿ ತೊಳಲುತ್ತಿರುವ ಮನುಷ್ಯವರ್ಗದೊಡನೆ ಸಹಾನುಭೂತಿ ಇವೇ ಮೊದಲಾದ ಸರ್ವಗುಣಗಳೂ ಭವಭೂತಿಯಲ್ಲಿ ಇದ್ದುವೆಂದು ಕಾಣುತ್ತದೆ. ಇದರೊಡನೆ ಅವನಿಗೆ ಭಾಷೆಯ ಮೇಲೆ ಪ್ರತಿಯೊಬ್ಬನೂ ಆಶಿಸತಕ್ಕ ಸ್ವಾಧೀನತೆಯಿತ್ತು. ಮಾತ್ರವಲ್ಲದೆ ಅವನ ಪದ್ಯಗಳಲ್ಲಿರುವ ಸಂಗೀತತಾಳಲಯಾದ್ಯನುಸಾರಿಯಾದ ಬಂಧಕೌಶಲವು ಸಾಮಾಜಿಕರನ್ನು ಮರುಳುಗೊಳಿಸುವ ಶಕ್ತಿಯಲ್ಲಿ ಅನುಪಮವಾಗಿದೆ. ಮನುಜಹೃದಯದ ಬೇರೆ ಬೇರೆ ಭಾವನೆಗಳನ್ನು ಚಿತ್ರಿಸುವ ಕಲೆಯಲ್ಲಿ ಅವನು ಜಾಣನಾಗಿದ್ದು ಎಲ್ಲೆಲ್ಲಿಯೂ ಅಂತಹ ಭಾವನೆಗಳ ವರ್ಣನೆಗಳ ಪಡಿಯಚ್ಚುಗಳನ್ನು ಸಾಮಾಜಿಕರ ಚಿತ್ತಭಿತ್ತಿಯಲ್ಲಿ ಸ್ಥಿರವಾಗಿರಿಸಲು ಪರ್ಯಾಪ್ತವಾದ ಒಳ್ಳೆಯ ಸಂದರ್ಭಗಳನ್ನು ಸಂಘಟಿಸುವುದರಲ್ಲಿ ತನಗಿರುವ ಜ್ಞಾನವನ್ನು ಪ್ರದರ್ಶಿಸುತ್ತಾನೆ.

ಒಂದೇ ಒಂದು ಕರುಣರಸವು ಬೇರೆಬೇರೆ ಬಗೆಗಳಲ್ಲಿ ಮತ್ತು ಅನೇಕರೀತಿಯ ಕಲೆಗಳಲ್ಲಿ ತನ್ನಿಂದ ಚಿತ್ರಿಸಲ್ಪಟ್ಟಿದೆ ಎಂದು ವ್ಯಂಗ್ಯವಾಗಿ ತೋರುವ ಕವಿಯ ಹೆಗ್ಗಳಿಕೆಯು ಸಾಮಾನ್ಯವಾದುದಲ್ಲ. ಪ್ರತಿಯೊಂದು ಅಂಕವೂ ನಮ್ಮ ಮನಸ್ಸಿನಲ್ಲಿ ಒತ್ತಿದ ಅಚ್ಚನ್ನು ಇನ್ನಷ್ಟು ಉಜ್ವಲಗೊಳಿಸಲು ಸಹಾಯಕವಾಗುತ್ತದೆ. ಪ್ರೇಕ್ಷಕನು ಹಾಗೂ ವಾಚಕನು ವಿಧಿಯು ಕೊಟ್ಟ ಪೆಟ್ಟುಗಳ ನೋವಿನಿಂದ ಕಷ್ಟಪಡುವ ರಾಮ, ಸೀತೆ, ಜನಕ, ಮತ್ತು ಇನ್ನಿತರ ಉದಾತ್ತ ವ್ಯಕ್ತಿಗಳ ಗೋಳಾಟಗಳಿಂದ ಉಕ್ಕಿ ಬರುತ್ತಿರುವ ಕಣ್ಣೀರಿನ ಪ್ರವಾಹವನ್ನು ತಡೆದುಕೊಳ್ಳಲು ಅಸಮರ್ಥನಾಗುವನು. ಹೃದಯಕರಗುವ ಶ್ರೀರಾಮನ ಕೋಮಲತೆಗೆ ವಿರುದ್ಧವಾಗಿ ಅವನು ತನ್ನ ಅರಸುತನದ ಕರ್ತವ್ಯಕ್ಕೆ ಯುಕ್ತವೆಂದು ಭಾವಿಸಿ ಕೈಕೊಂಡ ಸೀತಾಪರಿತ್ಯಾಗದ ಸಂದರ್ಭದಲ್ಲಿ ಅವನ

ಮನಸ್ಸಿನ ದಾರ್ಢ್ಯತೆಯು ಅದರ ಫಲದಲ್ಲಿ ಅತ್ಯಂತಕರುಣಾಜನಕ ವಾಗಿದೆ. ಹಾಗೆಯೇ ಅದು "ಮಹಾತ್ಮರ ಮನಸ್ಸು ವಜ್ರಕ್ಕಿಂತಲೂ ಕಠಿನವು; ಕೆಲವು ಸಂದರ್ಭಗಳಲ್ಲಿ ಹೂವಿಗಿಂತಲೂ ಮೃದುಲ"ವೆಂಬ ಕವಿಯ ಆಶಯವನ್ನು ಸಮರ್ಥಿಸುತ್ತದೆ.

ಕವಿಯು ಕಥಾಸಂವಿಧಾನದಲ್ಲಿ ಒಳ್ಳೆಯ ನೈಪುಣ್ಯವನ್ನು ತೋರ್ಪಿ ಸಿರುತ್ತಾನೆ. ಪ್ರಥಮಾಂಕದಲ್ಲಿ ಚಿತ್ರಶಾಲಾಪ್ರದರ್ಶನದ ದೃಶ್ಯವು ಮನಸ್ಸಿಗೆ ಅತ್ಯಂತರಂಜಕವಾಗಿದೆ. ಎರಡನೆಯ ಅಂಕದಲ್ಲಿ ಆತ್ರೇಯೀ ವಾಸಂತಿಯರ ಸಂಭಾಷಣೆ, ಮತ್ತು ಹೃದಯಸ್ಪರ್ಶಿಯಾದ ಅಭಿರುಚಿ ಯನ್ನು ಹುಟ್ಟಿಸುವ ಹಿಂದೆ ನಡೆದ ಕೆಲವು ವೃತ್ತಾಂತಗಳು, ವೇದನಾ ಜನಕವಾದ ಸ್ಮೃತಿಯನ್ನು ತಟ್ಟಿ ಎಬ್ಬಿಸುವ ಕಾನನದೃಶ್ಯದ ವರ್ಣನೆ ಇವೆಲ್ಲವೂ ಹೃದಯಂಗಮಗಳೇ ಸರಿ. ಮೂರನೆಯ ಅಂಕವು ಕವಿಯ ಕಲ್ಪನಾಶಕ್ತಿಯ ನಿಪುಣತಮವಾದ ಸಿದ್ಧಿಯಂತಿದ್ದು ಅದು ಕರುಣರಸದ ವಿಷಯದಲ್ಲಿ ಅಸಮಾನವಾಗಿ ಶೋಭಿಸುತ್ತಿದೆ. ಸೀತೆಯ ಇದಿರಲ್ಲೇ ರಾಮನ ಗೋಳಾಟ, ರಾಮನನ್ನು ಪುನರುಜ್ಜೀವನಗೊಳಿಸುವ ಮತ್ತು ಅವನ ದುಃಖವನ್ನು ಉದ್ರೇಕಗೊಳಿಸುವ ಸೀತೆಯ ಸಂಸ್ಪರ್ಶ, ದುಃಖ ಭಾರದಲ್ಲಿಯೂ ಸೀತೆಯ ಸ್ತುತ್ಯವಾದ ಸಹನಾಶಕ್ತಿ, ಮತ್ತು ಆದರ್ಶ ಮಹಿಳೆಗೆ ಯೋಗ್ಯವಾದ ವರ್ತನೆ ಇವೆಲ್ಲವೂ ಸಾಮಾಜಿಕರ ಸಹಾನು ಭೂತಿಯನ್ನು ಎಬ್ಬಿಸುವಂತೆಯೂ ಆ ಸನ್ನಿವೇಶಗಳ ಕರುಣಾಮಯವಾದ ಗಾಂಭೀರ್ಯವನ್ನು ಜನರಿಗೆ ಮುಂದಟ್ಟುಮಾಡುವಂತೆಯೂ ಉತ್ತಮ ರೀತಿಯಲ್ಲಿ ಕವಿಯಿಂದ ಸಂಘಟನೆಗೊಂಡಿವೆ. ನಾಲ್ಕನೆಯ ಅಂಕವು ಹಿರಿಯರೂ ಪಾವನರೂ ಆಗಿರುವ ವ್ಯಕ್ತಿಗಳನ್ನೇ ನಮ್ಮ ಮುಂದೆ ಇರಿ ಸುವುದಾಗಿದೆ. ಸಾಮಾಜಿಕರು ಅವರೊಡನೆ ಪೂಜ್ಯಭಾವನೆಯುಳ್ಳವ ರಾಗಿ ಅವರಿಗೆ ಗೌರವವನ್ನು ಸಲ್ಲಿಸುತ್ತ ಸೀತೆಯ ನಾಶವನ್ನು ನೆನೆದು ದುಃಖಿಸುವ ಅವರೊಡನೆ ತಾವೂ ಕಣ್ಣೀರಿಡುತ್ತಾರೆ. ಆ ಅಂಕದ ಕೊನೆ ಯಲ್ಲಿ ಕುದುರೆಯನ್ನು ಪ್ರತ್ಯಕ್ಷೀಕರಿಸಲು ಲವನನ್ನು ಕೂಡಿಕೊಳ್ಳಲು ಗುಂಪುಗುಂಪಾಗಿ ಪ್ರವೇಶಿಸುವ ಬಟುಗಳಿಂದ ಉಂಟುಮಾಡಲ್ಪಟ್ಟ ವಿನೋದವು ಸ್ವಾಗತೀಕರಿಸಲು ಯೋಗ್ಯವಾಗಿದೆ. ಅದರ ಸನ್ನಿವೇಶ

ದಿಂದ ಐದನೆಯ ಅಂಕವು ಯುದ್ಧಕ್ಕೆ ತಕ್ಕುದಾಗಿದೆ. ಕರುಣರಸದ ಚಿತ್ರಣದಲ್ಲಿ ಕವಿಯು ಹೇಗೋ ಹಾಗೆಯೇ ಇಲ್ಲಿ ವೀರರಸವನ್ನು ಚಿತ್ರಿಸುವುದರಲ್ಲಿಯೂ ತಾನು ನಿಪುಣನೆಂಬುದನ್ನು ವ್ಯಕ್ತಪಡಿಸಿದ್ದಾನೆ. ಚಂದ್ರಕೇತುಲವರ ಗಾಂಭೀರ್ಯ, ಪರಾಕ್ರಮದ ನಡತೆ, ಒಬ್ಬರನ್ನೊಬ್ಬರು ಕೆಣಕುವ ಅವರ ಮಾತುಗಳು, ಪರಸ್ಪರವಾದ ಅವರ ಉಪಚಾರ, ಇದಿರಾಳಿಯ ಗುಣಗಳನ್ನು ಮೆಚ್ಚುವಿಕೆ ಇವುಗಳೆಲ್ಲವೂ ದುಃಖಮಯವಾದ ಹಿಂದಣ ಸಂದರ್ಭಗಳಿಂದ ನೊಂದ ಮನಸ್ಸನ್ನು ಉಲ್ಲಾಸಗೊಳಿಸುವ ರಸಾಯನಗಳಂತೆ ವರ್ತಿಸುತ್ತಿವೆ. ಆರನೆಯ ಅಂಕವು ಎಲ್ಲವುಗಳಿಗಿಂತ ಬಲಹೀನವಾಗಿರುತ್ತದೆ. ಎಂದರೆ ಸಾಮಾಜಿಕರನ್ನು, ಕೂಡಲೆ ರಾಮನಿಗೆ ಸೀತಾದೇವಿಯೊಡನೆ ಸಂಭವಿಸಲಿರುವ ಸಾಂಗತ್ಯವನ್ನು ನೋಡಲು ಸಿದ್ಧರಾಗಿರುವಂತೆ ಕಲ್ಪಿಸುತ್ತದೆ. ಏಳನೆಯ ಅಂಕದಲ್ಲಿ ಸೀತಾರಾಮರ ಸಮಾಗಮವನ್ನು ಸಾಧಿಸಲು ವಾಲ್ಮೀಕಿಯು ಮಾಡಿದ ಹಂಚಿಕೆಯಂತೆ ರಂಗಭೂಮಿಯಲ್ಲಿ ಒಂದು ಪ್ರದರ್ಶನವು ನಡೆಯುತ್ತಿದೆ. ಸೀತೆಯ ಪಾತಿವ್ರತ್ಯವು ದೇವತೆಗಳ ಹಾಗೂ ಪವಿತ್ರ ವ್ಯಕ್ತಿಗಳ ಮುಂದೆ ಮತ್ತೊಮ್ಮೆ ದೃಢವಾಗುವುದು. ಇಲ್ಲಿಗೆ ಅವಳ ದುರ್ದೈವದ ಅವಸಾನವು ವರ್ಣಿಸಲಾಗಿದೆ. ಈ ಅಂತರ್ನಾಟಿಕೆಯು ಕವಿಯ ಅತಿಚಾತುರ್ಯದ ಅಥವಾ ತೀಕ್ಷ್ಣಬುದ್ಧಿಯ ಪರಿಣಾಮವೆಂದು ಸಾಮಾಜಿಕರು ಕೊಂಡಾಡುವಂತಿರುವುದು.

ಪಾತ್ರರಚನೆ— ಭವಭೂತಿಯು ತನ್ನ ಯೋಗ್ಯತೆಗೆ ತಕ್ಕಂತೆಯೇ ಪಾತ್ರಗಳನ್ನು ಕಲ್ಪಿಸಿಕೊಂಡಿರುವನು. ಅವುಗಳಲ್ಲಿ ಶ್ರೀರಾಮ, ಸೀತೆ, ಲಕ್ಷ್ಮಣ, ಜನಕ, ಅರುಂಧತಿ, ಕೌಸಲ್ಯೆ, ಚಂದ್ರಕೇತು, ಲವ, ಕುಶ, ವಾಲ್ಮೀಕಿ, ವಾಸಂತಿ, ಆತ್ರೇಯಿ, ಭಾಗೀರಥಿ, ಪೃಥಿವಿಯೇ ಮುಂತಾದ ಹೆಚ್ಚಿನವೂ ದೇವಾಂಶವುಳ್ಳವುಗಳಾಗಿ ದಿವ್ಯಗುಣಗಳಿಂದ ಶೋಭಿಸತಕ್ಕವು. ದೃಶ್ಯಕಾವ್ಯವು ಜನಾಂಗದಲ್ಲಿ ಸತ್ಪರಿಣಾಮವನ್ನು ಉಂಟುಮಾಡಬೇಕಾದರೆ ಅಲ್ಲಿಯ ಪಾತ್ರಗಳು ತಕ್ಕಂತೆ ಯೋಗ್ಯತೆಯಿಂದ ಕೂಡಿ ಆದರ್ಶಪ್ರಾಯಗಳಾಗಿರಬೇಕು. ಅವುಗಳಲ್ಲಿ ಕೆಲವು ಪಾತ್ರಗಳ ಪರಿಶೀಲನೆಯನ್ನು ಇಲ್ಲಿ ಕೊಡಲಾಗುವುದು.

ಶ್ರೀರಾಮ— ವಾಲ್ಮೀಕಿರಾಮಾಯಣದ ನಾಯಕನು ಅಸಂಖ್ಯ ಭಾರತೀಯರ ಹೃನ್ಮಂದಿರಗಳಲ್ಲಿ ನೆಲಸಿದ ಆರಾಧ್ಯದೇವತೆಯಾಗಿರುವನು. ಶ್ರೀಮನ್ನಾರಾಯಣನ ಏಳನೆಯ ಅವತಾರವೆಂದು ಸರ್ವರೂ ಅವನನ್ನು ಗೌರವಿಸುತ್ತಾರೆ. ಸಾಮಾಜಿಕ ಹಾಗೂ ಕೌಟುಂಬಿಕ ಸದ್ಗುಣಗಳೇ ರೂಪುಗೊಂಡ ಮೂರ್ತಿಯೆಂದು ಅವನನ್ನೆಲ್ಲರೂ ಕೊಂಡಾಡುತ್ತಾರೆ. ಉತ್ಕೃಷ್ಟವಾದ ಸ್ವಾರ್ಥತ್ಯಾಗದಿಂದಲೂ ಸತ್ಪುತ್ರನ ಕರ್ತವ್ಯವನ್ನು ನಿರ್ವಹಿಸುವ ಬುದ್ಧಿಯಿಂದಲೂ ಅವನು ಜನರ ಪ್ರೀತಿಗೆ ಪಾತ್ರನಾಗಿರುತ್ತಾನೆ. ಅವನು ಪಿತೃವಾಕ್ಯಪರಿಪಾಲನೆಗಾಗಿ ರಾಜ್ಯವನ್ನು ಪರಿತ್ಯಜಿಸಿ ಕಾಡಿಗೆ ಹೋದನು. ಅರಸನಾಗಿ ಬಂದ ನಂತರದ ಅವನ ಆಳಿಕೆಯು ಜಗತ್ತಿಗೇ ಆದರ್ಶಪ್ರಾಯವಾಗಿ ಮೆರೆಯಿತು. ಆದುದರಿಂದಲೇ ಇಂದಿಗೂ ಜನರ ಬಾಯಲ್ಲಿ 'ರಾಮರಾಜ್ಯ'ವೆಂದು ಉದಾಹರಿಸುವ ರೂಢಿಯು ನೆಲಸಿರುವುದು.

ಭವಭೂತಿಯು ತನ್ನ ಉತ್ತರರಾಮಚರಿತ್ರೆಯಲ್ಲೂ ಅವನನ್ನೇ ನಾಯಕನನ್ನಾಗಿ ಆರಿಸಿಕೊಂಡರೂ ಅತ್ಯುತ್ತಮನನ್ನಾಗಿ ಚಿತ್ರಿಸಿರುವನು. ಗೃಹಸ್ಥರಲ್ಲಿ ಇರತಕ್ಕ ಎಲ್ಲಾ ಗುಣಗಳಿಗೂ ಇವನ ಗುಣಗಳು ಆದರ್ಶಗಳಾಗಿದ್ದು ಇವನು ಆದರ್ಶಪತಿಯಾಗಿ ಮಾತ್ರವಲ್ಲದೆ ಆದರ್ಶಪಿತನಾಗಿ ಚಿತ್ರಿಸಲ್ಪಟ್ಟಿರುವನು. ಹೆಂಡತಿಯ ಮೇಲೆ ಗಂಡನಿಗೆ ಇರಬೇಕಾದ ವಿಶ್ವಾಸಕ್ಕೆ ಶ್ರೀರಾಮನು ಸರಿಯಾದ ಉದಾಹರಣೆಯಾಗಿರುತ್ತಾನೆ. ಸೀತೆಯ ಮೇಲೆ ಅವನಿಗಿದ್ದ ಪ್ರೀತಿಯು ಪವಿತ್ರವೂ ರೂಢಮೂಲವೂ ಆಗಿರುವುದು. ಆದರೆ ಅವನು ಸೀತೆಯನ್ನು ಪರಿತ್ಯಾಗಮಾಡದಿರಲು ಸಾಧ್ಯವಿರಲಿಲ್ಲ. ಅಂತೆಯೇ ಸಾಂಸಾರಿಕಸುಖದ ಮತ್ತು ಮನಶ್ಶಾಂತತೆಯ ಯಾಗಕ್ಕಾಗಿ ಅವನು ಅವಳನ್ನು ತ್ಯಜಿಸಿದನು. ಆದರೆ ನಾವಿಲ್ಲಿ ಕರ್ತವ್ಯಕ್ಕಾಗಿ ಮಾಡಿದ ಅನುಕರಣೀಯವಾದ ಆತನ ಪ್ರೇಮತ್ಯಾಗವನ್ನು ಕಾಣುತ್ತಿರುವೆವು. ಅವನ ಗುಣಚಿತ್ರಕ್ಕೆ ಅತ್ಯಮೋಘವಾದ ಜನರಂಜನೆಯು "ಕರುಣೆಯನೋ ನೇಹಮನೋ ನೆರೆಸುಖಮನೊ ಕೊನೆಗೆ ಜಾನಕೀದೇವಿಯನೋ" ಎಂಬ ಪದ್ಯದಲ್ಲಿ ಸರಿಯಾಗಿ ವಿವರಿಸಲ್ಪಟ್ಟಿರುವುದು. ಶ್ರೀರಾಮನು ತನ್ನ ಪ್ರಜೆಗಳ ಕ್ಷೇಮವನ್ನು ಸಾಧಿಸುವುದೇ

ತನ್ನ ಪ್ರಧಾನವಾದ ಕರ್ತವ್ಯವೆಂದೂ ಅದಕ್ಕಾಗಿ ತನ್ನ ಸರ್ವಸುಖ ಗಳನ್ನೂ ತ್ಯಜಿಸತಕ್ಕದ್ದೆಂದೂ ಆತನು ಭಾವಿಸಿದ್ದನು. ಸೀತೆಯು ಅವನ ಪ್ರಾಣದಂತೆಯೂ ಇನ್ನೊಂದು ಹೃದಯದಂತೆಯೂ ಇದ್ದಳು. ಜನರನ್ನು ತೃಪ್ತಿಗೊಳಿಸುವುದಕ್ಕಾಗಿ ಅವನು ತನ್ನ ಸರ್ವಸ್ವವನ್ನು ಮಾತ್ರವಲ್ಲದೆ ಪ್ರಾಣಗಳನ್ನೇ ಸಮರ್ಪಿಸುವುದಕ್ಕೂ ಸಿದ್ಧನಾಗಿದ್ದನು. ಏನೂ ತಪ್ಪಿಲ್ಲದ ತನ್ನ ಪತ್ನಿಯನ್ನು ತಾನು ಪರಿತ್ಯಜಿಸುತ್ತಿದ್ದೇನೆಂದು ಆತನು ತಿಳಿದಿದ್ದನು. ಉದಾತ್ತಗುಣವುಳ್ಳ ಮತ್ತು ವಿಶೇಷಪ್ರೀತಿಯುಳ್ಳ ಪತಿಯಾಗಿದ್ದುದರಿಂದ ಅವನು ಅತಿಯಾಗಿ ಕಣ್ಣೀರುಸುರಿಸುತ್ತ ದುಃಖಿಸಿದನಾದರೂ ಜನರ ತೃಪ್ತಿಗಾಗಿ ಪೌರುಷದಿಂದ ಪತ್ನಿಯನ್ನು ಪರಿತ್ಯಾಗಮಾಡಿದನು. ಸೀತೆಯ ಪವಿತ್ರತೆ ಹಾಗೂ ಪಾತಿವ್ರತ್ಯದ ವಿಷಯದಲ್ಲಿ ಸ್ವತಃ ಅವನಿಗೇನೂ ಸಂಶಯ ವಿರಲಿಲ್ಲ. ಆದರೆ ಅವುಗಳ ವಿಷಯದಲ್ಲಿ ಅವನ ಪ್ರಜೆಗಳ ಆಕ್ಷೇಪ ಬಂದರೆ ಅವಳನ್ನು ಪರಿತ್ಯಜಿಸಿಯಾದರೂ ಅವರನ್ನು ತೃಪ್ತಿಗೊಳಿಸಲು ಅವನು ಕಾರ್ಯವನ್ನು ಕೈಗೊಳ್ಳಬೇಕಾಗಿತ್ತು.

ರಾಮನ ಸೀತಾಪರಿತ್ಯಾಗದ ವಿಷಯದಲ್ಲಿ ವಾಸಂತಿಯೇ ಮೊದ ಲಾದ ವಿಮರ್ಶಕರು "ಧರೆಯೊಳ್ಕೀರ್ತಿಪ್ರಿಯ ನಿಷ್ಠುರತೆಯ ಫಲದಿಂದೆ ನಿನಗೆ ಸಮನಿಸಿತಯಶಂ" ಎಂಬುದಾಗಿ ಪ್ರಜೆಗಳ ಹಿತಕ್ಕಾಗಿ ಜೀವನ ಸಾರಸರ್ವಸ್ವವನ್ನು ಅನ್ಯಾಯವಾಗಿ ಪರಿತ್ಯಾಗಮಾಡಿ ಯಾವಜ್ಜೀವಿತವೂ ಗೋಳಾಟಕ್ಕೆ ಗುರಿಯಾಗುವಂತೆ ಕಲ್ಪಿಸಿಕೊಂಡ ಶ್ರೀರಾಮನಲ್ಲಿ ತಪ್ಪನ್ನು ಕಂಡಿರುತ್ತಾರೆ. ನಿಜವಾಗಿ ವಿಚಾರಮಾಡಿ ನೋಡಿದರೆ, ಆ ಸಂದರ್ಭ ದಲ್ಲಿ ಅಸಹಾಯಳಾಗಿ ಸೀತೆಯ ಮೇಲಿರುವ ಕರುಣೆಯಿಂದ ವಶೀಕೃತ ರಾಗಿ ಅವರು ಶ್ರೀರಾಮನಲ್ಲಿ ದೋಷವನ್ನು ಆರೋಪಿಸಿದರಲ್ಲದೆ ಬೇರೇನೂ ಅಲ್ಲವೆಂದು ತಿಳಿದುಬರುವುದು. ಶ್ರೀರಾಮನ ದೃಷ್ಟಿಯು ಅಷ್ಟು ಸಂಕು ಚಿತವಾಗಿರುವುದೆಂದು ಅವರು ಭಾವಿಸುವರೆ? ಕರ್ತವ್ಯಮಾರ್ಗದಿಂದ ಮುಂದುವರಿದು ಪರೀಕ್ಷಿಸಿ ತೀರ್ಮಾನಿಸಿದರೆ ದಾರುಣವೆಂದು ತೋರುವ ಅವನ ವರ್ತನೆಯನ್ನು ನಿಂದಿಸುವುದಕ್ಕಿಂತ ಅಸದೃಶವಾದ ಅವನ ಸ್ವಾರ್ಥ ತ್ಯಾಗ ರೂಪವಾದ ಕ್ರಿಯೆಗಾಗಿ ಅವನು ನಮ್ಮ ಮೆಚ್ಚುಗೆಗೆ ಪಾತ್ರನಾಗು ತ್ತಾನೆ. ರಾಮನು ತನ್ನ ಕ್ರೂರತೆಯನ್ನು ತನ್ನ ಅಂತಃಕರಣದಲ್ಲಿ ಎಷ್ಟು

ತಿಳಿದುಕೊಂಡಿದ್ದನೋ ಇತರರು ಅವನ ಕ್ರೂರತೆಯನ್ನು ತಮ್ಮ ಅಂತಃಕರಣದಲ್ಲಿ ಅಷ್ಟು ತಿಳಿದುಕೊಂಡಿಲ್ಲವೆಂದು ಹೇಳಬಹುದು. ಅವನ ಜೀವನವು ಅವನ ಪ್ರಜೆಗಳಿಗಾಗಿಯೇ ಇರುವುದರಿಂದ ಯಾವ ರೀತಿಯಲ್ಲಾದರೂ ಅವರನ್ನು ಸಂತೋಷಪಡಿಸಲು ಅವನು ಬದ್ಧನಾಗಿರುವುದನ್ನು ನಾವು ಕಾಣುವೆವು. ಅವನೇನೂ ಕ್ರೂರನಾಗಿಲ್ಲ ಮೃದುವಾದ ಮನಸ್ಸಿನ ಕರುಣೆಯ ಮೂರ್ತಿಯನ್ನು ನಾಟಕದ ಆದ್ಯಂತವಾಗಿ ನಾವು ಕಾಣುತ್ತಿದ್ದೇವೆ.

ಈ ನಾಟಕದಲ್ಲಿ ಶ್ರೀರಾಮನ ಸದ್ವರ್ತನೆಯ ಬೇರೆ ಕೆಲವು ಚಿಕ್ಕ ಲಕ್ಷಣಗಳೂ ತೋರಿಬರುವುವು. ಶ್ರೀರಾಮೋಪಾಖ್ಯಾನದಲ್ಲಿ ಅತಿಪ್ರಸಿದ್ಧವಾದ ಪರಶುರಾಮಪರಾಜಯದ ವೃತ್ತಾಂತದ ಕಡೆಗೆ ಅವನ ದೃಷ್ಟಿಯನ್ನು ಲಕ್ಷ್ಮಣನು ಸೆಳೆಯಲು ಹವಣಿಸುವಾಗ ಅದನ್ನವನು ಮೌನವಾಗಿ ಅಲಕ್ಷಿಸಿದುದರಿಂದ ಅವನ ವಿನಯಾಧಿಕ್ಯವು ಹೇಗೆ ವ್ಯಕ್ತವಾಗುವುದೆಂಬುದನ್ನು ನಾವು ಕಾಣುವೆವು. ಆಗಲೇ ಸೀತೆಯು—ತನ್ನ ಆರ್ಯಪುತ್ರನ ವಿನಯಮಾಹಾತ್ಮ್ಯದಿಂದ ಬೆರಗಾಗಿ ಹೊಗಳಿಬಿಟ್ಟಿದ್ದಾಳೆ. ವನವಾಸಕ್ಕೆ ನಿದಾನವಾದ ಕೈಕೇಯಿಮಂಥರೆಯರ ದುರ್ಮಂತ್ರದ ವೃತ್ತಾಂತವನ್ನು ಲಕ್ಷ್ಮಣನು ನಿರ್ದೇಶಿಸಲು ತೊಡಗುತ್ತಿದ್ದಾಗಲೇ ರಾಮನದನ್ನು ಮಧ್ಯದಲ್ಲೇ ಹಾರಿಸಿ ತನ್ನ ದೃಷ್ಟಿಯನ್ನು ಬೇರೊಂದು ಕಡೆಗೆ ಬೀರುವಲ್ಲಿ ಅವನ ಉತ್ತಮವಾದ ಕ್ಷಮಾಗುಣವೂ ಔದಾರ್ಯವೂ ಎಷ್ಟು ಸಮಂಜಸವಾಗಿ ಚಿತ್ರಿತವಾಗಿರುವುದೆಂಬುದನ್ನು ನಾವು ಲಕ್ಷಿಸಬೇಕು. ಇತರರು ತನಗೆ ಮಾಡಿದ ಕೇಡನ್ನು ಸಂಪೂರ್ಣವಾಗಿ ಕ್ಷಮಿಸಿ ಅದನ್ನು ತೀರಾ ಮರೆಯುವಷ್ಟು ವಿಶಾಲಹೃದಯವು ರಾಮನದು. ಲವಣಾಸುರನ ಸಂಹಾರಕ್ಕಾಗಿ ಶತ್ರುಘ್ನನನ್ನು ಕಳುಹಿಸಿಕೊಡುವುದು; ಅಕೃತ್ಯಕಾರಿಯಾದ ಶಂಬೂಕನ ಶಿಕ್ಷೆಗಾಗಿ ತಾನೇ ಹೊರಟುಹೋಗುವುದು; ಇವೆರಡೂ ಅವನು ತನ್ನ ವೈಯಕ್ತಿಕವಾದ ಕ್ಷೇಮಕ್ಕೆ ಅಪ್ರಧಾನತೆಯನ್ನಿತ್ತು ಪ್ರಜಾಕ್ಷೇಮದಲ್ಲಿ ಹೇಗೆ ತತ್ಪರನಾಗಿರುವನೆಂಬುದಕ್ಕೆ ನಿದರ್ಶನಗಳಲ್ಲವೆ? ಸೀತಾಪರಿತ್ಯಾಗವಾದ ಬಳಿಕ ತಾನು ಬೇರೆ ಮದುವೆಯಾಗದೆ ಸ್ವರ್ಣಮಯವಾದ ಸೀತಾಪ್ರತಿಕೃತಿಯನ್ನು ತನ್ನ ಬಳಿಯಲ್ಲಿರಿಸಿಕೊಂಡು ಯಾಗಕಾರ್ಯವನ್ನು

ನಿರ್ವಹಿಸಿದನೆಂದು ವರ್ಣಿಸಿದ ಕವಿಯು ಶ್ರೀರಾಮನಿಗೆ ದಾಂಪತ್ಯ ಜೀವನದಾಂಪತ್ಯಪ್ರೇಮಗಳಲ್ಲಿ ಎಷ್ಟು ನಂಬಿಕೆಯಿತ್ತೆಂಬುದನ್ನು ಅಸಾಧಾರಣರೀತಿಯಿಂದ ಪ್ರದರ್ಶಿಸಿರುವನಲ್ಲವೆ?

ನಾಟಕದ ಮೊದಲ ಎರಡು ಅಂಕಗಳು ರಾಮನಲ್ಲಿ ಮುಖ್ಯವಾಗಿರತಕ್ಕ ಸ್ವಭಾವಗುಣಗಳನ್ನು ನಮ್ಮ ಮುಂದೆ ಇರಿಸುವುವು. ಮತ್ತಿನವು ಅವನ ವಿಷಯವಾಗಿ ನಮ್ಮ ಮನಸ್ಸಿನಲ್ಲಿ ಉಂಟಾದ ಅಚ್ಚನ್ನು ಬಲಪಡಿಸಲು ಸಹಾಯಕಗಳಾಗುವುವು. ಮತ್ತು ಅವನು ಬಹುವಾಗಿ ದಯಾರ್ದ್ರ ಹೃದಯನೆಂಬುದನ್ನೂ ವಿಪತ್ತುಗಳ ಮುಂದೆ ಅವನೆಂತಹ ಧೀರನೆಂಬುದನ್ನೂ ನಮ್ಮ ಕಣ್ಣ ಮುಂದೆ ಇರಿಸುತ್ತವೆ. ಒಂದೇ ಮಾತಿನಲ್ಲಿ ಹೇಳುವುದಿದ್ದರೆ ವಾಲ್ಮೀಕಿಯ ನಾಯಕನು ಭವಭೂತಿಯ ಕೈಗೆ ಸಿಲುಕಿ ಲವಾಂಶವಾದರೂ ಕುಂದಿ ಹೋಗಿಲ್ಲ. ಅವನು ವೈಯಕ್ತಿಕ ಮತ್ತು ರಾಜನಿಗಿರತಕ್ಕ ಸದ್ಗುಣಗಳಿಂದ ಭರಿತನಾಗಿ ಆದರ್ಶಪ್ರಾಯನಾದ ಅದೇ ಶ್ರೀರಾಮಚಂದ್ರನಾಗಿರುತ್ತಾನೆ.

ಸೀತೆ— ಹಿಂದೂದೇಶದ ಪ್ರಾಚೀನಇತಿಹಾಸದಲ್ಲಿ ಅಸಂಖ್ಯಾತವಾಗಿ ಉದಾಹರಿಸಲ್ಪಡುವ ಸ್ತ್ರೀಧರ್ಮವಿಶೇಷಗಳುಳ್ಳ ಮಹಿಳಾಮಣಿಗಳ ಸುಂದರಚಿತ್ರಗಳಲ್ಲಿ ರಾಮಾಯಣಕಥಾನಾಯಿಕೆಯಾದ ಸೀತಾದೇವಿಯು ಒಬ್ಬಳು. ಅವಳು ಸತೀಗುಣಗಳಿಗೆ ಮಾದರಿಯಾಗಿದ್ದ ಮತ್ತು ತಮ್ಮಿಂದ ಸ್ತ್ರೀಜನ್ಮಕ್ಕೆ ದಿವ್ಯವಾದ ಪರಿಪೂರ್ಣತೆಯನ್ನಿತ್ತ ಸಾವಿತ್ರಿ, ದಮಯಂತಿ, ದ್ರೌಪದಿ ಮೊದಲಾದ ಸ್ತ್ರೀರತ್ನಗಳ ಸಾಲಿಗೆ ಸೇರತಕ್ಕವಳು. ಇಲ್ಲಿ ನಾವು ಗಮನಿಸಬೇಕಾದ ವಿಷಯವೆಂದರೆ ಅವರೆಲ್ಲರೂ ಕಠಿಣವಾದ ಪರೀಕ್ಷೆಗೆ ಗುರಿಮಾಡಲ್ಪಟ್ಟು ಅವುಗಳಲ್ಲಿ ಅವರ ಪರಿಶುದ್ಧತೆ, ಧೈರ್ಯ, ಸಹನೆ ಮತ್ತು ಇನ್ನಿತರಸದ್ಗುಣಗಳು ಚೆನ್ನಾಗಿ ವ್ಯಕ್ತಗಳಾಗುವ ರೀತಿಯಲ್ಲಿ ಅವರು ಜಯಶಾಲಿಗಳಾಗಿರುವರು. ಈ ಮಹಿಳೆಯರ ಜೀವನದಲ್ಲಿ ಪ್ರಕಟೀಕೃತವಾದ ಭಾರತದ ಹೆಂಗೆಳೆಯರ ಕೀರ್ತಿಯನ್ನು ನಾವು ಯಾವಾಗ ನೆನೆಯುತ್ತೇವೆಯೋ ಆಗ ನಮ್ಮ ಮನಸ್ಸೆಂಬ ಕಣ್ಣಿನ ಮುಂದೆ ಪ್ರಧಾನವಾಗಿ ಸಾಧುಸ್ವಭಾವದ ಮತ್ತು ವ್ಯಸನಶೀಲವುಳ್ಳ ಸೀತೆಯು ಉಪಸ್ಥಿತಳಾಗಿ ನಮ್ಮ ಹಾರ್ದಿಕಸಹಾನು

ತಾಪವನ್ನೂ ಮೆಚ್ಚುಗೆಯನ್ನೂ ಎಬ್ಬಿಸುತ್ತಾಳೆ. ಇಂತಹ ಸ್ತ್ರೀರತ್ನಗಳಲ್ಲಿ ಸೀತೆಯು ಹೆಚ್ಚು ಅಭಾಗ್ಯೋಪಹತಳೆಂದು ಕಾಣುತ್ತದೆ. ಅವಳ ಜೀವ ನವು ನಿರ್ಜನವಾದ ಘೋರಾರಣ್ಯದಲ್ಲಿ ಮತ್ತು ಬಂಧನರೂಪದಲ್ಲಿ ಕಳೆದ ದಿನಗಳಲ್ಲಿ, ಗಾಢವಾದ ಮತ್ತು ಅಯುಕ್ತವಾದ ಸಂಶಯಗಳಿಗೆ ವಿಷಯ ವಾದ ಅಸಾಧಾರಣ ಮತ್ತು ಅತಿ ದೀರ್ಘವಾದ ಸಂಕಟದಿಂದ ಕೂಡಿದ ಅವಳ ವಿಷಾದಮಯವಾದ ಕಥೆಯು ನಮ್ಮ ಮನಸ್ಸಿನಲ್ಲಿ ಒಡಮೂಡು ತ್ತದೆ.

ಸೀತೆಯ ದುಃಖಮಯವಾದ ಕಥೆಯಲ್ಲಿ ರಾಮನ ಸಿಂಹಾಸನಾ ರೋಹಣದ ಬಳಿಕ ಅವನು ಮಾಡುವ ಅವಳ ಪರಿತ್ಯಾಗವೆಂಬ ಒಂದು ವೃತ್ತಾಂತವನ್ನು ಮಾತ್ರ ಭವಭೂತಿಯು ತನ್ನ ಕೃತಿಗೆ ವಿಷಯವನ್ನಾಗಿ ಆರಿಸಿರುತ್ತಾನೆ. ಈ ಬಲವಂತವಾದ ಪರಿತ್ಯಾಗದ ಮೂಲಕ ಉಂಟಾದ ವಿಯೋಗವು ಅವಳ ಪ್ರೀತಿಮಯವಾದ ಸ್ವಭಾವಕ್ಕೆ ಬಲವಾದ ಆಘಾತ ವಾಗಿರುತ್ತದೆ. ಅವಳು ಶ್ರೀರಾಮನನ್ನು ಎಷ್ಟು ಪ್ರೀತಿಸುತ್ತಿದ್ದಳು; ಅವನಲ್ಲಿ ಎಷ್ಟು ವಿಶ್ವಾಸವಿಟ್ಟಿದ್ದಳು; ಅವನನ್ನೆಷ್ಟು ಪೂಜಿಸುತ್ತಿದ್ದಳು; ಮಾತ್ರವಲ್ಲದೆ ಅವನ ಪ್ರತಿಯೊಂದು ಮಾತನ್ನೂ ಮೆಚ್ಚಿ ಅವುಗಳಲ್ಲಿ ಹೇಗೆ ಶ್ರದ್ಧಾದರಗಳನ್ನು ತೋರಿಸುತ್ತಿದ್ದಳು, ಎಂಬುದನ್ನು ಕವಿಯು ಪ್ರಥಮಾಂಕದಲ್ಲೇ ತೋರಿಸಿರುವನು. ಸೀತೆಯ ಅದೇ ಗುಣಗಳು ಮೂರನೆಯ ಅಂಕದಲ್ಲಿ ರಾಮನಿಗೂ ಅವಳಿಗೂ ಅತ್ಯಾಶ್ಚರ್ಯಕರವಾಗಿ ಉಂಟಾಗುವ ಭೇಟಿಯಲ್ಲಿ ತೃಪ್ತಿಕರವಾಗಿ ತೋರಿಸಲ್ಪಟ್ಟಿವೆ. ಶ್ರೀ ರಾಮನು ತನ್ನನ್ನು ಪರಿತ್ಯಜಿಸಿದ ವಿಚಾರದಲ್ಲಿ ಅವನಲ್ಲಿ ದೋಷವನ್ನೆಣಿ ಸುವುದರ ಬದಲಾಗಿ ತಾನೇ ನಿಂದ್ಯಳೆಂದು ಭಾವಿಸಿಕೊಳ್ಳುತ್ತಾಳೆ. ಮಾತ್ರವಲ್ಲದೆ ತನ್ನ ಪ್ರಿಯಸಖಿಯಾದ ವಾಸಂತಿಯಾದರೂ ಈ ವಿಚಾರ ದಲ್ಲಿ ರಾಮನ ಮೇಲೆ ತಪ್ಪುಹೊರಿಸುತ್ತಿರುವುದನ್ನು ಅವಳು ಸಹಿಸುವು ದಿಲ್ಲ. ಅವಳ ಮನಸ್ಸಿನಲ್ಲಿ ಸದಾ ಶ್ರೀರಾಮನ ಸೌಖ್ಯವೇ ನೆಲೆಗೊಂಡಿತ್ತ ಲ್ಲದೆ ತನ್ನ ಸೌಖ್ಯದ ವಿಚಾರವಿರಲಿಲ್ಲ. ಅವಳು ಅವನ ವ್ಯಕ್ತಿತ್ವದಲ್ಲಿ ತನ್ನ ವ್ಯಕ್ತಿತ್ವವನ್ನು ಲೀನವಾಗಿಸುವುದಕ್ಕೆ ಸದಾ ಸಿದ್ಧಳಾಗಿದ್ದಳು. ಭಾರತೀಯರಮಣಿಯರು ತಮ್ಮ ನಿರಪೇಕ್ಷಪ್ರೇಮದಿಂದ ಮತ್ತು

ನಿಸ್ವಾರ್ಥಬುದ್ಧಿಯ ವಿಷಯದಲ್ಲಿ ಅತಿಪ್ರಾಚೀನಕಾಲದಿಂದಲೂ ಪ್ರಸಿದ್ಧರಾಗಿರುವರು. ಸೀತೆಯು ಅಂತಹ ಗುಣಗಳ ಅಪ್ರತಿಮಮೂರ್ತಿಯಾಗಿರುತ್ತಾಳೆ. ದಂಪತಿಗಳೊಳಗೆ ಪರಸ್ಪರವಾಗಿದ್ದ ನಿರ್ದೋಷ ಮತ್ತು ಸಂಪೂರ್ಣವಾದ ಪ್ರೀತಿಯು ರಾಮಾಯಣಕವಿಯಾದ ವಾಲ್ಮೀಕಿಯಿಂದ ಅಮಾನುಷವಾಕ್ಯದಲ್ಲಿ ತೋರಿಸಲ್ಪಟ್ಟಿದೆ. ಅದನ್ನೇ ಇನ್ನಷ್ಟು ಶೋಭಾಯಮಾನವಾಗುವಂತೆ ಮಾಡಲು ಅವಕಾಶವಿಲ್ಲದುದರಿಂದ ಭವಭೂತಿಯು ಆ ಮೂಲವನ್ನೇ ಉದ್ಧರಿಸಿ ತೃಪ್ತಿಗೊಂಡಿರುತ್ತಾನೆ. ಅಂತೂ ದಾಂಪತ್ಯಪ್ರೇಮಕ್ಕೆ ಆದರ್ಶವಾಗಿ ಸೀತಾದೇವಿಯನ್ನು ಚಿತ್ರಿಸುವ ಪ್ರಯತ್ನದಲ್ಲಿ ಉತ್ತಮರೀತಿಯಿಂದ ಜಯಶಾಲಿಯಾಗಿರುವನು.

**ಚಂದ್ರಕೇತು**— ಲಕ್ಷ್ಮಣನ ಮಗನಾದ ಚಂದ್ರಕೇತುವು ಯಾಗದ ಕುದುರೆಯನ್ನು ಹಿಂಬಾಲಿಸುವ ಸೇನೆಯ ಅಧಿಪತಿಯಾಗಿರುವನು. ಅವನು ರಾಜಕುಮಾರನೂ, ಶೂರನೂ, ಪ್ರವರ್ತನೆಯಲ್ಲಿ ಶಿಷ್ಟಾಚಾರ ಸಂಪನ್ನನೂ, ನಿಷ್ಕಪಟಿಯೂ, ಇತರರ ಗುಣಗಳನ್ನು ಪರಿಗ್ರಹಿಸಿ ಅವುಗಳನ್ನು ಮುಕ್ತಕಂಠದಿಂದ ಹೊಗಳತಕ್ಕವನೂ ಆಗಿರುವನು. ಎಳೆಯ ವಯಸ್ಸಿನವನಾದರೂ ಸರಿಯಾದ ಕ್ಷತ್ರಿಯವೀರನ ಯುದ್ಧೋತ್ಸಾಹದಿಂದ ಉತ್ತೇಜಿತನು. ಅವನಲ್ಲಿ ಯಜ್ಞೀಯಾಶ್ವದ ರಕ್ಷಣೆಯ ದೊಡ್ಡದಾದ ಹೊಣೆಗಾರಿಕೆಯು ಶ್ರೀರಾಮನು ಅವನ ಪರಾಕ್ರಮದಲ್ಲಿ ಇಟ್ಟಿದ್ದ ವಿಶ್ವಾಸವನ್ನು ವಿಶದಗೊಳಿಸುತ್ತಿದೆ. ಸಮಗ್ರಸೈನ್ಯದೊಂದಿಗೆ ಏಕಾಕಿಯಾಗಿ ಯುದ್ಧಮಾಡುತ್ತಿರುವ ಲವನನ್ನು ಕಂಡು ಅವನು ಆಶ್ಚರ್ಯಕರವಾದ ಮೆಚ್ಚುಗೆಯಿಂದ ತುಂಬಿದನು. ಯುದ್ಧದಲ್ಲಿರುವ ಉತ್ಸಾಹದಿಂದ ಶರವೃಷ್ಟಿಯನ್ನೇ ಸುರಿಸುತ್ತ ತನ್ನನ್ನು ಇದಿರಿಸುವ ವೀರನಾದ ಲವನ ಪರಾಕ್ರಮಕ್ಕೆ ಬೆಚ್ಚಿ ಬೆರಗಾಗದೆ ಆತನ ಸಾಹಸವನ್ನು ಮನದಣಿಯೆ ಶ್ಲಾಘಿಸಿದನು. ಏಕಾಕಿಯಾಗಿ ಯುದ್ಧಮಾಡುತ್ತಿರುವ ಲವನ ಮೇಲೆ ಸೈನಿಕರೆಲ್ಲರೂ ಸೇರಿ ಯುದ್ಧಕ್ಕಾಗಿ ಮುಂಬರಿಯುವುದನ್ನು ಕಂಡಾಗ ಅವರನ್ನು ಮೂದಲಿಸುವ ಅವನ ಮಾತಿನಲ್ಲಿ ಎಷ್ಟು ಆಳವಾದ ನಿಂದೆಯು ಅಡಕವಾಗಿದೆ ಎಂಬುದನ್ನು ನಾವು ಗಮನಿಸಬೇಕಾಗಿದೆ. ಪಾದಚಾರಿಯಾಗಿ ಯುದ್ಧಮಾಡುವ ಲವನೊಡನೆ ರಥಸ್ಥನಾಗಿ ಕಾದಾಡಲು ಸಮ್ಮ

ತಿಸದೆ ಕೆಳಗೆ ಇಳಿಯುವುದರಿಂದ ಅವನಿಗೆ ಯುದ್ಧದಲ್ಲಿರತಕ್ಕ ಶೌರ್ಯ ಧಾರ್ಮಿಕತೆಗಳು ವ್ಯಕ್ತಗಳಾಗುವುವು. ಶೂರರಿಬ್ಬರೊಳಗೆ ನಡೆಯುವ ವಾಗ್ವಾದವು ಅವರಿಬ್ಬರ ಯೌವನದ ಮತ್ತು ಧೈರ್ಯದ ಸ್ವಭಾವಕ್ಕೆ ತಕ್ಕುದಾಗಿದೆ. ತನ್ನ ದೊಡ್ಡಪ್ಪಂದಿಯಾದ ಶ್ರೀರಾಮನ ಮೇಲೆ ಚಂದ್ರಕೇತುವಿಗಿರುವ ಗೌರವವು ಅತ್ಯಂತಪ್ರಶಂಸನೀಯವು. ಲವನು ಚಂದ್ರಕೇತುವನ್ನು ಯುದ್ಧಕ್ಕಾಗಿ ಕೆಣಕುವ ರೀತಿಯು ವಿಚಿತ್ರವಾಗಿದೆ. ಸೂರ್ಯವಂಶದ ಯಜಮಾನನ ಮೇಲೆ ಇಡಬೇಕಾದ ಬಹುಮಾನಕ್ಕೆ ನ್ಯೂನತೆಯುಂಟಾದುದರಿಂದ ಚಂದ್ರಕೇತುವು ಕೆರಳಿಹೋದನು. ಅದರಿಂದ ಅವನ ಸ್ವಾಮಿಭಕ್ತಿಯು ಪ್ರಕಟವಾಗುತ್ತದೆ. ಲವನು ಜೃಂಭಕಾಸ್ತ್ರವನ್ನು ಪ್ರಯೋಗಿಸಿ ಜಯಪಡೆದರೂ ಚಂದ್ರಕೇತುವು ಅಸೂಯೆಪಡಲಾರನು. "ತಾತನು ನನ್ನನ್ನು ನೋಡುತ್ತಿರುವಂತೆಯೇ ಪ್ರಸನ್ನವೂ ಸ್ನೇಹಯುಕ್ತವೂ ಆಗಿರುವ ದೃಷ್ಟಿಯಿಂದ ಸಹಜವೀರನಾದ ಲವನನ್ನು ನೋಡಬೇಕು" ಎಂದು ರಾಮಚಂದ್ರನೊಡನೆ ಪ್ರಾರ್ಥಿಸಿಕೊಳ್ಳುವ ಚಂದ್ರಕೇತುವು ಎಷ್ಟು ವಿಶಾಲ ಹೃದಯದ ಮಹಿಮನೆಂಬುದನ್ನು ತಿಳಿದುಕೊಳ್ಳಬಹುದಾಗಿದೆ.

**ಲವಕುಶರು**— ಈ ಅವಳಿಮಕ್ಕಳು ಯೋಗ್ಯತೆಯಲ್ಲಿ ಪ್ರಖ್ಯಾತನಾದ ರಾಮಚಂದ್ರನಿಗೆ ಸಮಾನರಾಗಿ ಚಿತ್ರಿತರಾಗಿರುವರು. ವಾಲ್ಮೀಕಿಮುನಿಯ ಸಾಕ್ಷಾನ್ನೇತೃತ್ವದಲ್ಲಿ ಹಿತಕರವಾದ ವಾತಾವರಣದಲ್ಲಿ ಪೋಷಿತರಾದ ಅವರು ಕ್ಷತ್ರಿಯಕುಮಾರೋಚಿತವಾದ ಸಕಲಗುಣಗಳನ್ನೂ ಅತ್ಯುತ್ತಮರೀತಿಯಲ್ಲಿ ತೋರಿಸುತ್ತಾರೆ. ಲವನು ಕ್ಷತ್ರಿಯಬ್ರಹ್ಮಚಾರಿಯ ಜೀವನವನ್ನು ನಡೆಯಿಸುತ್ತಿರುವಂತೆ ರಂಗದ ಮೇಲೆ ನಮ್ಮ ಕಣ್ಣಿಗೆ ತೋರಿಬರುವನು. ಅವನಲ್ಲಿ ಮಾತಾಪಿತೃಗಳ ಕಂಠಧ್ವನಿಯೂ ವಿನಯವೂ ಸ್ವಭಾವಸಿದ್ಧವಾದ ಘನತೆಯೂ ಇರುವುದಲ್ಲದೆ ಅವನು ವಿನೀತನು, ನಿಷ್ಕಪಟಿಯು. ಅವನ ಯುದ್ಧೋತ್ಸಾಹದ ವೈಭವದ ಮುಂದೆ ನಾವು ಮೈಮರೆಯುತ್ತೇವೆ. ರಾಮಾಯಣದ ಕಥಾನಾಯಕನ ಮೇಲೆಯೂ ಅವನ ವಿರೋಧವಾದವನ್ನು ಕೇಳಿದರೆ ಅವನ ವಿಕ್ರಮಕ್ಕೆ ತಲೆದೂಗದವರಿಲ್ಲ. ದರ್ಪಸೌಜನ್ಯಗಳ ಮಿಶ್ರಣವೆಂದು ಸುಮಂತ್ರನು

ಅವನನ್ನು ವರ್ಣಿಸಿರುವುದು ಬಹು ಯೋಗ್ಯವಾಗಿದೆ. ಜನಕಅರುಂಧತೀ ಕೌಸಲ್ಯೆಯರಿಗೆ ಕರ್ತವ್ಯಬುದ್ಧಿಯಿಂದ ಹೇಗೆ ನಮಸ್ಕರಿಸುತ್ತಾನೆ ಎಂಬುದನ್ನು ಗಮನಿಸಿದರೆ ಅವನಿಗೆ ಹಿರಿಯರಲ್ಲಿರತಕ್ಕ ವಿನಯ ಆದರಗಳು ಸ್ಫುಟವಾಗದೆ ಇರಲಾರವು. ಇದಿರಾಳಿಯು ಎಂತಹ ವೀರನಾಗಿದ್ದರೂ ಲಕ್ಷ್ಯವಿಲ್ಲದೆ ಪ್ರತಿಭಟಿಸುವನಾದುದರಿಂದ ಲವನು ಅಸಹಾಯಶೂರ ನೆಂಬುದರಲ್ಲಿ ಸಂದೇಹವಿಲ್ಲ. ಇದಿರಾಳಿಗಳ ಒಣಜಂಭದ ಮಾತುಗಳಿಗೆ ಲವನೆಂದಿಗೂ ಎದೆಗುಂದುವವನಲ್ಲ. ಅವನ ಯೋಗ್ಯತೆಯನ್ನು ರಾಮನು ಭಾವಿಸುವಂತೆ "ತನುವಾಂತಿರ್ಪುದೊ ಲೋಕರಕ್ಷಣೆಗೆನಲ್ಕಾತನಸ್ತ್ರವೇದಂ" ಎಂಬ ಪದ್ಯದಿಂದ ಕವಿಯು ಚಿತ್ರಿಸಿರುವುದು ಬಹು ಯೋಗ್ಯವಾಗಿರುವುದು. ಮತ್ತು ಅವನ ಕೋಮಲವಾದ ಭಾವಗಳು ಅವನ ಜನಕನ ಮುಂದೆ ಉದ್ಬುದ್ಧವಾಗುತ್ತವೆ. ಅವನು ಚಿಕ್ಕಮಗುವಿನಂತೆ ಸರಳತೆಯೊಡನೆ ಶ್ರೀರಾಮನ ಪಾದಗಳಿಗೆ ನಮಸ್ಕರಿಸಿ ತನ್ನ ಪೋಷಣೆ ಮತ್ತು ಎಲ್ಲಾ ಸಂಸ್ಕೃತಿಗಳೂ ಎಷ್ಟು ಉತ್ತಮವಾಗಿದ್ದುವು ಎಂಬುದನ್ನು ಸಪ್ರಮಾಣವಾಗಿ ತಿಳಿಸುತ್ತಾನೆ. ಅವನಿಗಾಗ ಶ್ರೀರಾಮನೊಡನೆ ಯಾವ ಸಂಬಂಧವಿದೆಯೆಂಬ ವಿಚಾರವೇನೂ ತಿಳಿದಿರಲಿಲ್ಲ.

ಕುಶನು ರಂಗದಲ್ಲಿ ಸ್ವಲ್ಪಕಾಲದವರೆಗೆ ಮಾತ್ರವೇ ತರಲ್ಪಟ್ಟಿರುವನು. ಹಾಗಿದ್ದರೂ ಅವನು ಹೆದರಿಕೆಯನ್ನು ಕಂಡರಿಯದ ಲವನಿಗೆ ತಾನು ಯೋಗ್ಯನಾದ ಅಣ್ಣನೆಂಬುದನ್ನು ಪ್ರೇಕ್ಷಕರ ಮನಸ್ಸಿಗೆ ದೃಢಪಡಿಸಿಕೊಳ್ಳುತ್ತಾನೆ. ಅವನ ಹೃದಯದಲ್ಲಿ ಪ್ರಜ್ವಲಿಸುವ ಯುದ್ಧೋತ್ಸಾಹವೆಂಬ ಬೆಂಕಿಯನ್ನು ಪ್ರಕಟಿಸಿಕೊಳ್ಳಲು ಅವನ ಪ್ರವೇಶವೊಂದೇ ಸಾಕಾಗಿದೆ. ಕವಿಯು ಅವನ ಯೋಗ್ಯತೆಯನ್ನು ರಾಮನ ಮೂಲಕ ಹೇಳಿಸಿದ—"ಸುರಪಾಲಂಗಭಯಂಗಳಿತ್ತು ಕಡುದುಷ್ಟಧ್ವಾಂತಮಂ ಬಾರಿಸುತ್ತಿರೆ"— ಎಂದು ಹೇಳಿಸಿದ ಪದ್ಯವನ್ನು ಗಮನಿಸಿದರೆ ಅದು ಅಕ್ಷರಶಃ ನಿಜವೆನಿಸದೆ ಇರಲಾರದು. ಕುಶನೂ ಲವನಂತೆಯೇ ರಾಮನನ್ನು ಕಂಡೊಡನೆ ಗೌರವಭಾವದಿಂದ ತುಂಬಿದವನಾಗುತ್ತಾನೆ. ಅವನ ಹೃದಯದಲ್ಲಿದ್ದ ವೈರಭಾವವೆಲ್ಲವೂ ಎಲ್ಲಿಯೋ ಮರೆಯಾಗಿ ಉಚಿತವಾದ ವಿನಯಭಾವದಿಂದ ಶ್ರೀರಾಮನಿಗೆ ಪ್ರಣಾಮವನ್ನೆಸಗುವನು.

**ವಾಲ್ಮೀಕಿ**—ಪ್ರಶಂಸನೀಯವಾದ ವಾಲ್ಮೀಕಿ ಮುನಿಯು ರಘುಗಳ ವಂಶದಲ್ಲಿ ಅಸಾಮಾನ್ಯವಾದ ಅಭಿರುಚಿಯುಳ್ಳವನಾಗಿರುತ್ತಾನೆ. ಸೀತಾ ರಾಮರ ಮೇಲಿರುವ ಇವನ ಕನಿಕರವು ವಿಶೇಷವಾದುದು. ಇವನು ಭವಿಷ್ಯವನ್ನು ತಿಳಕೊಳ್ಳುವ ದಿವ್ಯದೃಷ್ಟಿಯುಳ್ಳವನು. ಎಲ್ಲಿಯೋ ವನಾಂತರದ ಆಶ್ರಮದಲ್ಲಿದ್ದರೂ ಸೀತೆಯ ಪಾತಿವ್ರತ್ಯವನ್ನು ಪ್ರಸಿದ್ಧಪಡಿಸಿ ವಿಯೋಗಹೊಂದಿದ ರಾಜದಂಪತಿಗಳ ಸಂಯೋಗವನ್ನು ಸಾಧಿಸಲು ವಿಶೇಷವಾಗಿ ಯತ್ನಿಸುತ್ತಾನೆ. ಮುನಿಯು ಪರಬ್ರಹ್ಮದ ಧ್ಯಾನದಲ್ಲಿಯೂ ಗಾಢವಾದ ದೈವಭಕ್ತಿಯಲ್ಲಿಯೂ ನಿರತನಾಗಿರುವುದು ಪ್ರಸಿದ್ಧವಾದರೂ ವಾಲ್ಮೀಕಿಯು ತನ್ನ ಹೃದಯದ ಪ್ರೇರಣೆಗಳ ಅರಿವಿಲ್ಲದವನಾಗಿರಲಿಲ್ಲ. ಇವನು ಯಾವಾಗಲೂ ಅತಿ ಮೃದುಸ್ವಭಾವದವನೂ ದಯಾಳುವೂ ಆಗಿದ್ದು ಇತರರನ್ನು ಪವಿತ್ರಗೊಳಿಸಲು ಯೋಗ್ಯವಾಗಿರುವ ತನ್ನ ಶಕ್ತಿಯನ್ನು ಜೀವಲೋಕದ ಉದ್ಧಾರಕ್ಕಾಗಿ ಉಪಯೋಗಿಸುತ್ತಾನೆ. ಹಿಂದೂ ದೇಶವು ಎಂತಹ ಆಳಿಕೆಯಿಂದ ಮೆರೆಯಬೇಕೆಂಬ ದೂರದೃಷ್ಟಿಯನ್ನಿಟ್ಟು ಕೊಂಡು ಮುಂದೆ ಚಕ್ರವರ್ತಿಗಳಾಗಲಿರುವ ಕುಶಲವರೆಂಬ ಸೂರ್ಯ ವಂಶದ ಅಂಕುರಗಳನ್ನು ಹೊಣೆಗಾರಿಕೆಯುಳ್ಳ ಕುಲಪತಿಯಾಗಿ ಶಿಕ್ಷಿಸಿರುವನು. ಅವನ ಆಜ್ಞೆಗೆ ತಲೆವಾಗದ ಸಮ್ರಾಟನೇ ಇದ್ದಿಲ್ಲವೆಂದರೆ ಈತನ ಸ್ಥಾನಮಾನಗಳನ್ನೂ ಮಹಿಮೆಯನ್ನೂ ನಾವು ತಿಳಿದುಕೊಳ್ಳಬಹುದಾಗಿದೆ.



# ಉತ್ತರರಾಮಚರಿತ್ರೆಯ ಕಥಾಸಂಗ್ರಹ

**ಮೊದಲನೆಯ ಅಂಕದಲ್ಲಿ**—ನಾಂದಿಯ ಬಳಿಕ ಸೂತ್ರಧಾರನು ಪ್ರವೇಶಿಸಿ,—"ಶ್ರೀರಾಮಚಂದ್ರನ ಪಟ್ಟಾಭಿಷೇಕವು ನೆರವೇರಿದ ಮೇಲೆ ದೂರದೇಶಗಳಿಂದ ಬಂದವರೆಲ್ಲರೂ ಸತ್ಕೃತರಾಗಿ ತಂತಮ್ಮ ದೇಶಗಳಿಗೆ ಮರಳಿಹೋದರು; ವಸಿಷ್ಠ ಅರುಂಧತಿ ಕೌಸಲ್ಯೆ ಮೊದಲಾದ ಗುರುಹಿರಿಯರೆಲ್ಲರೂ ಯಜ್ಞಕ್ಕಾಗಿ ಋಷ್ಯಶೃಂಗನ ಆಶ್ರಮಕ್ಕೆ ತೆರಳಿದರು; ಅನೇಕ ದಿನಗಳು ಕಳೆದು ಹೋದುವೆಂಬ ಅನುಷ್ಠಾನಲೋಪದ ಭಯದಿಂದ ಜನಕನು ಮಗಳ ಮನೆಯಿಂದ ವಿದೇಹಕ್ಕೆ ತೆರಳಿದನು; ಪೂರ್ಣಗರ್ಭಿಣಿಯಾದ ಸೀತೆಯು ಹೊತ್ತುಹೋಗದೆ ವಿಮನಸ್ಕಳಾಗಿರುವಳೆಂದು ತಿಳಿದು ಜನಾಧಿಪನಾದ ರಾಮಚಂದ್ರನು ಆಸ್ಥಾನದಿಂದ ಎದ್ದು ಅವಳನ್ನು ಸಮಾಧಾನಪಡಿಸುವುದಕ್ಕಾಗಿ ಅಂತಃಪುರಕ್ಕೆ ಬರುವನು" ಎಂದು ಪ್ರಸ್ತಾವಿಸುತ್ತ ಹೊರಟುಹೋಗುವನೆಂದು ಕಥೆಯು ಪ್ರಾರಂಭವಾಗುವುದು.

ಹಾಗೆಯೇ ರಾಮನು ಸೀತೆಯನ್ನು ಸಮಾಧಾನಪಡಿಸುತ್ತಿದ್ದಾಗ, ಋಷ್ಯಶೃಂಗಾಶ್ರಮದಿಂದ ಬಂದ ಅಷ್ಟಾವಕ್ರನು "ರಾಮನೇ ನೀನು ಸೀತೆಯ ಬಯಕೆಗಳನ್ನು ಪೂರೈಸಬೇಕು; ಲೋಕಾರಾಧನೆಯಲ್ಲಿ ತತ್ಪರನಾಗಿದ್ದು ಕೀರ್ತಿಯನ್ನು ಗಳಿಸಿಕೊಳ್ಳಬೇಕು" ಎಂಬ ಗುರು ಸಂದೇಶವನ್ನು ಅರುಹುವನು. ಅದನ್ನು ಶಿರಸಾವಹಿಸಿ ರಾಮನು, ಲೋಕಾರಾಧನೆಗಾಗಿ ಸ್ನೇಹ ಕರುಣೆ ಸೌಖ್ಯ ಮೊದಲಾದುವುಗಳನ್ನು ತೊರೆಯುವೆನು. ಬೇಕಾಗಿ ಬಂದರೆ, ಜಾನಕೀದೇವಿಯನ್ನೂ ತೊರೆಯಲು ಹಿಂಜರಿಯುವವನಲ್ಲವೆಂಬ ತನ್ನ ಕರ್ತವ್ಯ ನಿಷ್ಠೆಯನ್ನು ತಿಳಿಯಪಡಿಸುವ ಪ್ರತಿಸಂದೇಶವನ್ನು ಕಳುಹುವನು. ಬಳಿಕ ಲಕ್ಷ್ಮಣನು ಬಂದು "ದೇವಿಯರ ಮನಸ್ಸನ್ನು ಸಮಾಧಾನಪಡಿಸುವುದಕ್ಕಾಗಿ ಅಂತಃಪುರದ ಬೀದಿಯಲ್ಲಿ ಪೂರ್ವರಾಮಾಯಣದ ಕಥಾಭಾಗವು ಅಂದವಾಗಿ ಚಿತ್ರಿತವಾಗಿರುವುದು; ಅದನ್ನು ಅವಲೋಕಿಸಬೇಕು" ಎಂದು ವಿಜ್ಞಾಪಿಸಿಕೊಂಡ ಮೇರೆಗೆ ಸೀತಾರಾಮರು ಅವನೊಂದಿಗೆ ಹೋಗಿ ಆಲೇಖ್ಯವನ್ನು ಸಂದರ್ಶಿ

ಸುವರು. ಅದನ್ನು ನೋಡಿದ ರಾಮನ ಮನಸ್ಸಿನಲ್ಲಿ ಮೊದಲು ಅನುಭವಿಸಿದ ಹರ್ಷವಿರಹಶೋಕಾದಿ ಭಾವಗಳು ಒಡಮೂಡುವುವು. ಚಿತ್ರದಲ್ಲಿ ಬರೆಯಲ್ಪಟ್ಟ ದಂಡಕಾರಣ್ಯದ ಸೊಬಗನ್ನು ನೋಡುತ್ತಿದ್ದಂತೆಯೇ ಸೀತೆಯ ಮನಸ್ಸಿನಲ್ಲಿ "ಇನ್ನೊಮ್ಮೆ ಆ ವನಲಕ್ಷ್ಮಿಯನ್ನು ನೋಡಬೇಕು; ಗಂಗಾತೀರ್ಥದಲ್ಲಿ ಸ್ನಾನಮಾಡಬೇಕು" ಎಂಬ ಬಯಕೆಯುಂಟಾಗುವುದು. ರಾಮನದನ್ನು ಈಡೇರಿಸುವುದಕ್ಕಾಗಿ ಸಿದ್ಧಪಡಿಸಿದ ರಥವನ್ನು ತರಬೇಕೆಂದು ಲಕ್ಷ್ಮಣನೊಡನೆ ಹೇಳುವನು. ಅದೇ ವೇಳೆಗೆ ದುರ್ಮುಖನೆಂಬ ಗೂಢಚಾರನು ಬಂದು ಸೀತಾದೇವಿಗೆ ಬಂದ ಲೋಕಾಪವಾದವನ್ನು ಗುಟ್ಟಾಗಿ ರಾಮನೊಡನೆ ತಿಳಿಸುವನು. ಅದನ್ನು ಕೇಳಿ ರಾಮನು ಮೂರ್ಛಿತನಾಗುವನು. ಬಳಿಕ ಮೆಲ್ಲಮೆಲ್ಲಗೆ ಸಮಾಧಾನಹೊಂದಿ ಲೋಕಾರಾಧನೆಯಲ್ಲಿರುವ ತನ್ನ ಹೊಣೆಗಾರಿಕೆಯನ್ನು ನೆನೆದುಕೊಂಡು ಮನಸ್ಸಿನಲ್ಲೇ ಮರುಗುತ್ತ, ಸೀತೆಯನ್ನು ಅರಣ್ಯದಲ್ಲಿ ಬಿಟ್ಟು ಬರಬೇಕೆಂದು ಲಕ್ಷ್ಮಣನಿಗೆ ಆಜ್ಞೆಮಾಡುವನು. ರಾಜಾಜ್ಞೆಯನ್ನು ಮೀರಲಾರದೆ ಲಕ್ಷ್ಮಣನು ಸೀತೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಅರಣ್ಯದ ಕಡೆಗಾಗಿ ಸಾಗುವನು.

ಎರಡನೆಯ ಅಂಕದಲ್ಲಿ— ಲಕ್ಷ್ಮಣನು ಕಾಡಿನಲ್ಲಿ ಬಿಟ್ಟು ಹೋದ ಮೇಲೆ ಚಿಂತಾಪೀಡಿತಳಾದ ಸೀತೆಯು ಉಂಟಾದ ಪ್ರಸವದುಃಖವನ್ನು ಸಹಿಸಲಾರದೆ ಗಂಗಾಪ್ರವಾಹದಲ್ಲಿ ಬಿದ್ದು ಅಲ್ಲೇ ಅವಳಿಮಕ್ಕಳನ್ನು ಪಡೆಯುವಳು. ಗಂಗಾಭೂದೇವಿಯರು ಬಂದು ಆಕೆಯನ್ನು ಸಮಾಧಾನಪಡಿಸುತ್ತ ಪಾತಾಳಲೋಕಕ್ಕೆ ಕರಕೊಂಡು ಹೋಗಿ ಆರೈಕೆ ಮಾಡುವರು. ಸ್ತನ್ಯಪಾನವನ್ನು ತೊರೆದ ಬಳಿಕ ಮಕ್ಕಳನ್ನು ವಾಲ್ಮೀಕಿ ಮುನಿಯ ಆಶ್ರಮಕ್ಕೆ ಕರೆತಂದು—ನೀವು ಇವರನ್ನು ಲಾಲಿಸಿಪಾಲಿಸುವುದಲ್ಲದೆ ಸೂರ್ಯವಂಶದ ಕ್ಷತ್ರಿಯರಿಗೆ ಬೇಕಾದ ಸರ್ವಸಂಸ್ಕಾರಗಳನ್ನೂ ನೆರವೇರಿಸಿ ಸಮಸ್ತವಿದ್ಯೆಗಳಲ್ಲೂ ಪಾರಂಗತರನ್ನಾಗಿ ಮಾಡಬೇಕು" ಎಂದು ಹೇಳಿ ಅವರನ್ನು ಆತನಿಗೆ ಸಮರ್ಪಿಸಿದ ಮೇರೆಗೆ ಆ ತರಳರು ಅಲ್ಲಿ ಸಕಲವಿದ್ಯೆಗಳಲ್ಲೂ ನೈಪುಣ್ಯವನ್ನು ಪಡೆಯುತ್ತ ಬಳೆಯುತ್ತಿದ್ದರು. ಆಗ ಅಯೋಧ್ಯೆಯಲ್ಲಿ ರಾಮಚಂದ್ರನು ಸ್ವರ್ಣದ ಸೀತೆಯ ಪ್ರತಿಮೆ

ಯನ್ನು ಗೃಹಿಣಿಯನ್ನಾಗಿ ಕಲ್ಪಿಸಿಕೊಂಡು ಅಶ್ವಮೇಧಯಾಗಕ್ಕಾಗಿ ದೀಕ್ಷಿತನಾಗಿ ದಿಗ್ದೇಶಗಳಲ್ಲಿ ಸಂಚರಿಸಿಬರುವಂತೆ ಕುದುರೆಯನ್ನು ಬಿಟ್ಟನು. ಅದರ ಬೆಂಗಾವಲಿಗಾಗಿ ಚತುರಂಗಸೈನ್ಯದೊಂದಿಗೆ ನಾಯಕನಾಗಿ ಲಕ್ಷ್ಮಣಕುಮಾರನಾದ ಚಂದ್ರಕೇತುವು ಹೊರಟಿರುವನು. ಆಗಲೇ ಶಂಬೂಕನೆಂಬ ಶೂದ್ರನೊಬ್ಬನು ಕಷ್ಟತಪಸ್ಸನ್ನು ಎಸಗುತ್ತಿರುವ ಅನ್ಯಾಯದ ಮೂಲಕ ಬ್ರಾಹ್ಮಣಕುಮಾರನು ಮೃತನಾದನು ಎಂಬುದಾಗಿ ದೂರು ಬಂದುದರಿಂದ ಆತನನ್ನು ಶಿಕ್ಷಿಸುವುದಕ್ಕಾಗಿ ವಿಮಾನದಲ್ಲಿ ಕುಳಿತುಕೊಂಡು ಹುಡುಕುತ್ತ ರಾಮನು ದಂಡಕಾರಣ್ಯದ ಕಡೆಗಾಗಿ ಬರುತ್ತಿದ್ದಾನೆ ಎಂಬ ಕಥಾಭಾಗವು ಆತ್ರೇಯೀವಾಸಂತಿಯರ ಸಂಭಾಷಣರೂಪವಾದ ಶುದ್ಧವಿಷ್ಕಂಭದಿಂದ ತಿಳಿದುಬರುವುದು.

ಹಾಗೆಯೇ ರಾಮನು ಶಂಬೂಕನನ್ನು ಹುಡುಕಿ ಹಿಡಿದು ಖಡ್ಗದಿಂದ ಆತನ ಕಂಠವನ್ನು ಛೇದಿಸುವನು. ಕೂಡಲೆ ತಪಸ್ವಿಯು ದಿವ್ಯಪುರುಷನಾಗಿ ಮಾರ್ಪಡುವನು. ತಪಸ್ಸಿನ ಫಲವಾಗಿ ಆತನಿಗೆ ಉತ್ತಮಲೋಕವು ಪ್ರಾಪ್ತವಾಗುವುದಾಗಿ ರಾಮನು ತಿಳಿಸುವನು. ಆಗಲೇ ಅವನಲ್ಲಿಂದ ರಾಮನ ಅನುಮತಿಯಮೇರೆಗೆ ಅಗಸ್ತ್ಯಾಶ್ರಮಕ್ಕೆ ಹೋಗುವನು. ರಾಮನು ಅಲ್ಲಿ ದಂಡಕೆಯ ಬೇರೆಬೇರೆ ಭಾಗಗಳನ್ನು ನೋಡುತ್ತ ಪೂರ್ವವೃತ್ತಾಂತಸ್ಮರಣೆಯಿಂದುಂಟಾದ ಸ್ನೇಹದುಃಖನಿರ್ವೇದಾದಿಗಳೊಡನೆ ದಂಡಕೆಯಿಂದ ಪಂಚವಟಿಯ ಕಡೆಗಾಗಿ ಸಂಚರಿಸುತ್ತಿದ್ದನು. ಆಗಲೇ ದಿವ್ಯಪುರುಷನ ಮೂಲಕ ಬಂದ ಅಗಸ್ತ್ಯನ ಕರೆಯನ್ನು ಮನ್ನಿಸಿ ಅವನೊಂದಿಗೆ ರಾಮನು ಪಂಚವಟಿಯಿಂದ ಅಗಸ್ತ್ಯಾಶ್ರಮದ ಕಡೆಗಾಗಿ ಹೊರಟುಹೋಗುವನು.

**ಮೂರನೆಯ ಅಂಕದಲ್ಲಿ** — ಶ್ರೀರಾಮನು ಅಗಸ್ತ್ಯಾಶ್ರಮದಿಂದ ಹಿಂತಿರುಗಿ ಪುನಃ ದಂಡಕೆಗೆ ಬಂದು ನೋಡುತ್ತ ಸೀತಾವಿರಹದುಃಖವನ್ನು ಸಹಿಸಲಾರದೆ ಎಂತಹ ಪ್ರಮಾದಕ್ಕೆ ಒಳಗಾಗುವನೋ ಎಂಬ ಸಂದೇಹದಿಂದ ಭಾಗೀರಥಿಯು ಸೀತೆಯನ್ನು ಕರೆದು ಮಗಳೇ ಈಗ ಮಕ್ಕಳಾದ ಕುಶಲವರಿಗೆ ಹನ್ನೆರಡನೆಯ ವರ್ಷದ ಮಂಗಳಗ್ರಂಥಿಯು ನೆರವೇರಬೇಕಾಗಿರುವುದರಿಂದ ನೀನು ಭೂಲೋಕಕ್ಕೆ ಹೋಗಿ ನೀನೇ ಕೊಯ್ದು

ಹೂಗಳಿಂದ ಭಗವಾನ್ ಸೂರ್ಯನಾರಾಯಣನನ್ನು ಪೂಜಿಸಬೇಕು ಎಂಬ ನೆವದಿಂದ ಅವಳನ್ನು ಗೋದಾವರೀತೀರಕ್ಕೆ ಕಳುಹಿಸುವಳು. ದೇವತಾನುಗ್ರಹದಿಂದ ಅವಳು ಅಲ್ಲಿ ಯಾರ ದೃಷ್ಟಿಗಳಿಗೂ ಗೋಚರಿಸದೆ ಇರುತ್ತಿದ್ದಳು. ಎಂಬ ವಿಚಾರವು ತಮಸೆಮುರಲೆಯರ ಸಂಭಾಷಣ ರೂಪವಾದ ಶುದ್ಧವಿಷ್ಕಂಭದಿಂದ ತಿಳಿದುಬರುವುದು.

ಬಳಿಕ ರಾಮನು ಸೀತೆಯ ವಿರಹಭರವನ್ನು ಸಹಿಸಲಾರದೆ ಮೂರ್ಛೆಹೊಂದುವನು. ಕೂಡಲೆ ಅಗೋಚರಳಾಗಿ ಸಂಚರಿಸುತ್ತಿದ್ದ ಸೀತೆಯು ಬಂದು ಸ್ವಕರಸ್ಪರ್ಶದಿಂದ ರಾಮನನ್ನು ಆಶ್ವಾಸಹೊಂದಿಸುವಳು. ಪ್ರಜ್ಞೆಹೊಂದಿದ ರಾಮನು ಸಂತೋಷದಿಂದ ಕಣ್ದೆರೆದು ನೋಡಲು ಸೀತೆಯು ತೋರಲಾರಳು. ಇದು ತನ್ನ ಪ್ರಮಾದವೆಂದು ತಿಳಿದ ಬಳಿಕ ರಾಮನು ಚಿರಪರಿಚಿತಗಳಾದ ಆನೆಯ ಮರಿ ಬೆಟ್ಟದ ನವಿಲು ಹುಲ್ಲೆ ಮೊದಲಾದುವುಗಳನ್ನು ನೋಡುತ್ತ ಸಂತಾಪದ ಒತ್ತಟವನ್ನು ತಡೆಯಲಾರದೆ ಗೋಳಾಡುತ್ತ, ವನದೇವತೆಯಾದ ವಾಸಂತಿಯಿಂದ ನಿಂದಿತನಾಗುತ್ತ ಮತ್ತೂ ಮೂರ್ಛಿತನಾಗುವನು. ಆಗಲೂ ಸೀತೆಯು ಅಗೋಚರಳಾಗಿಯೇ ಇದ್ದುಕೊಂಡು ಹೃದಯೇಶ್ವರನ ಹೃದಯಲಲಾಟಗಳಲ್ಲಿ ಸ್ಪರ್ಶಿಸುತ್ತ ಆತನನ್ನು ಪ್ರಜ್ಞೆಗೊಳಿಸುವಳು. ಅಲ್ಲಿ ರಾಮನು ಅತಿಯಾಗಿ ಗೋಳಾಡುತ್ತ ತನ್ನ ಜನ್ಮವನ್ನು ನಿಂದಿಸುತ್ತ ಇದ್ದು ಕೊನೆಗೆ ಆರಂಭಿಸಿದ ಅಶ್ವಮೇಧವನ್ನು ಪೂರೈಸಬೇಕು ಎಂದು ಎಚ್ಚತ್ತವನಂತೆ ಪುಷ್ಪಕವಿಮಾನವನ್ನೇರಿ ಅಯೋಧ್ಯೆಗಾಗಿ ಹೊರಟು ಹೋಗುವನು.

**ನಾಲ್ಕನೆಯ ಅಂಕದಲ್ಲಿ**— ದ್ವಾದಶವಾರ್ಷಿಕಯಜ್ಞವು ಕೊನೆಗೊಂಡ ಬಳಿಕ ಮಹಾರಾಜ್ಞಿಯರಾದ ಕೌಸಲ್ಯೆ ಮೊದಲಾದವರನ್ನು ಒಡಗೊಂಡಿರುವ ಅರುಂಧತೀದೇವಿಯೊಡನೆ ವಸಿಷ್ಠಮಹರ್ಷಿಯು ವಾಲ್ಮೀಕಿಮುನಿಯ ಆಶ್ರಮಕ್ಕೆ ಬರುವನು. ಅದೇ ಸಮಯಕ್ಕೆ ಸರಿಯಾಗಿ ವಿದೇಹಾಧಿಪನಾದ ಜನಕನು ಪ್ರಿಯಮಿತ್ರನಾದ ವಾಲ್ಮೀಕಿಯ ಸಂದರ್ಶನಕ್ಕಾಗಿ ಅಲ್ಲಿಗೆ ಬರುವನು ಎಂಬ ಸಂಗತಿಯು ಸೌಧಾತಕಿ ದಾಂಡಾಯನರೆಂಬ ವಾಲ್ಮೀಕಿಶಿಷ್ಯರ ಸಂಭಾಷಣರೂಪವಾದ ಮಿಶ್ರ ವಿಷ್ಕಂಭದಿಂದ ತಿಳಿದುಬರುವುದು.

ಹಾಗೆಯೇ ಜನಕನು ಕೌಸಲ್ಯೆ ಮೊದಲಾದ ದಶರಥಪತ್ನಿಯ ರೊಂದಿಗೆ ಸಂಭಾಷಿಸುತ್ತ ಹಿಂದಣ ಸಂದರ್ಭಗಳನ್ನು ನೆನೆದುಕೊಂಡು ನಿರ್ವೇದಹೊಂದುವನು. ಸೀತೆಯ ವಿಯೋಗಕ್ಕಾಗಿ ಅವರೆಲ್ಲರೂ ದುಃಖಿಸುತ್ತಿರಲು "ಎಲ್ಲವೂ ಕೊನೆಗೆ ಶುಭವಾಗಿಯೇ ಪರಿಣಮಿಸುವುದು" ಎಂದು ಹೇಳಿದ ವಸಿಷ್ಠನ ವಾಕ್ಯವನ್ನು ಅರುಂಧತೀದೇವಿಯು ಜ್ಞಾಪಕಪಡಿಸಿ ಎಲ್ಲರನ್ನೂ ಸಮಾಧಾನಪಡಿಸುವಳು. ಆಗಲೇ ಆಶ್ರಮದಲ್ಲಿ ಗೋಚರಿಸಿದ ಲವನೆಂಬ ಬಾಲಕನನ್ನು ನೋಡಿ "ರಾಮಭದ್ರನಂತೆಯೇ ತೋರುತ್ತಿರುವ ಇವನು ಯಾವನಾಗಿರಬಹುದೋ ಎಂದು ತಿಳಿಯಬೇಕೆಂಬ ಕುತೂಹಲದಿಂದ ಜನಕಾದಿಗಳು ರಾಜಸೇವಕನನ್ನು ಕಳುಹಿಸಿ ವಾಲ್ಮೀಕಿಯೊಡನೆ ಕೇಳಿಸುವರು. ಅದಕ್ಕೆ ವಾಲ್ಮೀಕಿಯು "ಎಲ್ಲವೂ ಸಕಾಲದಲ್ಲಿ ತಿಳಿದುಬರುವುದು" ಎಂದು ಹೇಳಿ ಕಳುಹುವನು. ಆಗ ಆಶ್ರಮವಾಸಿಗಳಾದ ಬಟುಗಳು ರಾಮನ ಯಜ್ಞೀಯಾಶ್ವವನ್ನು ಕಂಡು ಆಶ್ಚರ್ಯದಿಂದ ಓಡಿಬಂದು ಅದನ್ನು ನೋಡುವುದಕ್ಕಾಗಿ ಲವನನ್ನು ಕರಕೊಂಡು ಹೋಗುವರು. ಅಲ್ಲಿ ಲವನು ಅಶ್ವರಕ್ಷಕರ ಕಠಿಣವಾಕ್ಯಗಳನ್ನು ಕೇಳಿ ಕೋಪಾಟೋಪದಿಂದ ಕೆರಳಿಕೊಂಡು ಬಿಲ್ಲಿಗೆ ಹೆದೆಯೇರಿಸಿ ಧನುಷ್ಟಂಕಾರವೆಸಗುತ್ತ ಬಲಾತ್ಕಾರದಿಂದ ಅಶ್ವವನ್ನು ಹಿಡಿದು ಬಂಧಿಸುವನು.

ಐದನೆಯ ಅಂಕದಲ್ಲಿ — ಕುದುರೆಯನ್ನು ಅಪಹರಿಸಿದ ಲವನೊಂದಿಗೆ ಸೈನಿಕರು ಬಿಡದೆ ಹೋರಾಡುವರು. ಸೋತುಹೋದರೂ ಮರಳಿ ಬಂದು ಹೋರಾಡುವ ಸೈನಿಕರೆಲ್ಲರನ್ನೂ ಲವನು ಜೃಂಭಕಾಸ್ತ್ರ ಪ್ರಭಾವದಿಂದ ಮೂರ್ಛೆಗೊಳಿಸುವನು. ಆಗ ಚಂದ್ರಕೇತುವು ಲವನೊಂದಿಗೆ ಕಾದಾಡಲು ಬರುವನು. ಅವನಿಗಾಗ ಲವನೊಡನೆ ವೀರಪುರುಷೋಚಿತವಾದ ಸಂಲಾಪವಾಗುವುದು. ಮಹಾನುಭಾವನಾದ ಚಂದ್ರಕೇತುಕುಮಾರನ ಪ್ರಸನ್ನಕರ್ಕಶಗಳಾದ ವೀರವಚನಗಳಿಂದ ಲವನ ಹೃದಯವು ಸೆಳೆಯಲ್ಪಡುವುದು. ವಿಕ್ರಮಿಯಾದ ಲವನಲ್ಲಿ ನಿಷ್ಕಾರಣವಾಗಿ ತೋರಿಕೊಂಡ ಪಕ್ಷಪಾತದಿಂದ ಚಂದ್ರಕೇತುಹೃದಯವೂ ಸಂಬದ್ಧವಾಗುವುದು. ಆದರೂ ಮಾತಿಗೆ ಮಾತು ಮಸೆಯುತ್ತಿರಲು ರಾಮ

ಚಂದ್ರನ ನಡತೆಯ ಕುರಿತು ಹೀಯಾಳಿಸಿದ ಲವನನ್ನು ಚಂದ್ರಕೇತುವು ಸಹಿಸದಾದನು. ಹಾಗೆಯೇ ಕ್ರೋಧೋದ್ದೀಪಿತರಾದ ಕುಮಾರಕರಿಬ್ಬರೂ ಯುದ್ಧರಂಗವನ್ನು ಪ್ರವೇಶಿಸುವರು.

**ಆರನೆಯ ಅಂಕದಲ್ಲಿ** — ಚಂದ್ರಕೇತುಲವರೊಳಗೆ ಯುದ್ಧವು ಬಹುಭೀಕರವಾಗಿ ನಡೆಯಿತೆಂಬ ವಿಚಾರವು ವಿದ್ಯಾಧರದಂಪತಿಗಳ ಸಂಭಾಷಣಾತ್ಮಕವಾದ ಮಿಶ್ರವಿಷ್ಕಂಭದಿಂದ ತಿಳಿದುಬರುವುದು. ಶಂಬೂಕವಧೆಗಾಗಿ ಹೋಗಿದ್ದ ರಾಮನು ಪಂಚವಟಿಯಿಂದ ಅಯೋಧ್ಯೆಗಾಗಿ ಮರಳುತ್ತಿದ್ದ ವೇಳೆಗೆ ಕುಮಾರಕರ ಯುದ್ಧದ ವಾರ್ತೆಯನ್ನು ಕೇಳಿ ಸಮಾಧಾನಪಡಿಸುವುದಕ್ಕಾಗಿ ವಿಮಾನದಲ್ಲಿ ಬಂದಿಳಿಯುವನು. ಕೂಡಲೆ ಕುಮಾರಕರಿಬ್ಬರೂ ಕಲಹದಿಂದ ವಿರಮಿಸುವರು. ಚಂದ್ರಕೇತುವು ರಾಮನ ಮುಂದೆ ಲವನ ಪರಾಕ್ರಮಾತಿಶಯವನ್ನು ವಿಶೇಷವಾಗಿ ಹೊಗಳುವನು. ಅವನನ್ನು ನೋಡಿ ರಾಮನ ಹೃದಯವು ತನ್ನಂತೆಯೇ ಕರಗುತ್ತಿರುವುದು. ರಾಮನ ಹೇಳಿಕೆಯ ಮೇರೆಗೆ ಲವನು ತಾನು ಪ್ರಯೋಗಿಸಿದ ಜೃಂಭಕಾಸ್ತ್ರವನ್ನು ಉಪಸಂಹರಿಸುವನು. ಅಷ್ಟರಲ್ಲೇ ಯುದ್ಧದ ವರ್ತಮಾನವನ್ನರಿತ ಹಿರಿಯವನಾದ ಕುಶನೂ ಉದ್ಧತನಾಗಿ ಅಲ್ಲಿಗೆ ಬರುವನು. ಆಗ ರಾಮನು ಅವರಿಬ್ಬರನ್ನೂ ನೋಡುತ್ತ ತನ್ನ ವಂಶದ ಆಕೃತಿಯುಳ್ಳವರೆಂದೂ ಸೀತೆಯ ಗರ್ಭಸಂಭೂತರಾಗಿರಬಹುದೆಂದೂ ಅನುಮಾನಿಸುವನು. ಆಗಲೇ ಕೌಸಲ್ಯೆ ಅರುಂಧತಿ ಜನಕನೇ ಮೊದಲಾದ ಹಿರಿಯರೆಲ್ಲರೂ ಮಕ್ಕಳ ಕಲಹವನ್ನರಿತು ಅಲ್ಲಿಗೆ ಓಡಿಬರುವರೆಂಬುದನ್ನರಿತು ರಾಮನು ತಾನೇ ಹೋಗಿ ಅವರನ್ನು ಉಪಚರಿಸಬೇಕೆಂದು ಹೊರಟು ಹೋಗುವನು.

**ಏಳನೆಯ ಅಂಕದಲ್ಲಿ**—ವಾಲ್ಮೀಕಿ ಮುನಿಯ ಅಭಿಮತದಂತೆ ಲಕ್ಷ್ಮಣನು ಗಂಗಾತೀರದಲ್ಲೊಂದು ರಂಗಭೂಮಿಯನ್ನು ಏರ್ಪಡಿಸಿದನು. ಅಲ್ಲಿ ವಾಲ್ಮೀಕಿವಿರಚಿತವಾಗಿ ಅಪ್ಸರೆಯರು ಅಭಿನಯಿಸುವ ದೃಶ್ಯವನ್ನು ನೋಡುವುದಕ್ಕಾಗಿ ಪರಿವಾರದೊಂದಿಗೆ ರಾಮನು ಮಾತ್ರವಲ್ಲದೆ ಗುರುಹಿರಿಯರೂ ಪುರಪ್ರಮುಖರೂ ಸಮಸ್ತ ಪ್ರಜೆಗಳೂ ಆಹ್ವಾನಿತರಾಗಿ ಬಂದು ನೆರೆದಿರುವರು. ಆ ದೃಶ್ಯಕಾವ್ಯದಲ್ಲಿ ಕವಿಯು ಸೀತಾ

ದೇವಿಯ ಪರಿತ್ಯಾಗವಾದ ಮೇಲೆ ನಡೆದ ಸಂಗತಿಗಳೆಲ್ಲವನ್ನೂ ಸಂಕ್ಷೇಪವಾಗಿ ತಿಳಿಯಪಡಿಸಿದ್ದನು. ಎಲ್ಲವನ್ನೂ ಕಣ್ಣಾರೆ ನೋಡುತ್ತಿದ್ದ ರಾಮನಿಗೆ — ಸೀತೆಯು ಸಂಕಷ್ಟವನ್ನು ತಡೆಯಲಾರದೆ ಗಂಗಾಪ್ರವಾಹದಲ್ಲಿ ಧುಮುಕಿದುದು, ಅಲ್ಲೇ ಪುತ್ರಯುಗಳವನ್ನು ಪಡೆದುದು, ಪೃಥಿವೀ ಭಾಗೀರಥಿಯರಿಂದ ಸೀತೆಯ ರಕ್ಷಣೆಯಾದುದು, ಕ್ಷಾತ್ರೋಚಿತ ಸಂಸ್ಕಾರವನ್ನು ನೆರವೇರಿಸಿ ಸಮಸ್ತ ವಿದ್ಯೆಗಳಲ್ಲೂ ಪಾರಂಗತರನ್ನಾಗಿ ಮಾಡುವುದಕ್ಕಾಗಿ ಮಕ್ಕಳನ್ನು ವಾಲ್ಮೀಕಿಗೆ ಸಮರ್ಪಿಸಿದುದು, ಇವೇ ಮೊದಲಾದ ವಿಚಾರಗಳೆಲ್ಲವೂ ತಿಳಿದು ಬರುವುವು. ಈ ಉಪನಾಟಕದಲ್ಲಿ ಪ್ರಸವವಾದ ಬಳಿಕ ಸೀತೆಯು ಕಣ್ಮರೆಯಾಗಿ ಪಾತಾಳಲೋಕದಲ್ಲಿದ್ದು ಬಹುಕಾಲದ ಬಳಿಕ ಗಂಗಾಪೃಥಿವಿಯರೊಂದಿಗೆ ನೀರಿನಿಂದ ಎದ್ದು ಮೇಲಕ್ಕೆ ಬರುವಳು. ಹೀಗೆ ಎಲ್ಲರ ಸಮಕ್ಷಮದಲ್ಲಿ ತೋರಿ ಬಂದ ಸೀತೆಯ ಪಾವಿತ್ರ್ಯತೆಗಾಗಿ ರಾಮನು ಸಂತೋಷಗೊಂಡು ಗುರುಗಳ ಮುಂದೆ ಅವಳನ್ನೂ ಮಕ್ಕಳನ್ನೂ ಅಂಗೀಕರಿಸಿ ಬಹು ದೀರ್ಘಕಾಲ ಅನುಭವಿಸಿದ ವಿಯೋಗ ವ್ಯಥೆಯನ್ನು ಪರಿಹರಿಸಿದವನಾಗಿ ಆನಂದಾತಿಶಯವನ್ನು ಅನುಭವಿಸುವನು.



|| ಶ್ರೀ ||

# ಉತ್ತರರಾಮಚರಿತಮ್

## ಪ್ರಥಮಾಂಕಂ

**ಕಂದ॥** ಗುರುಭಕ್ತಿಯಿಂದೆ ಪೂರ್ವದ
ವರಕವಿಸಮ್ರಾಟರಡಿಗಳಂ ಸ್ಮರಿಸುತ್ತುಂ ।
ಪರಮಾತ್ಮನ ಕಲೆಗಮೃತೇ-
ಶ್ವರಿಗಾ ಶಾರದೆಗೆ ನಮಿಪೆವತಿನಮ್ರತೆಯಿಂ ॥ ೧ ॥

(ನಾಂದಿಯ ಬಳಿಕ ಸೂತ್ರಧಾರನು ಪ್ರವೇಶಿಸುವನು)

**ಸೂತ್ರಧಾರ**—(ಸಭೆಯ ಕಡೆಗೆ ನೋಡಿ) ಸಭಾಸದರೆ, ನಾನು ಹೆಚ್ಚು ಹೇಳುವುದರಿಂದ ಪ್ರಯೋಜನವಿಲ್ಲ; ಕಾಲಪ್ರಿಯಾನಾಥನೆಂದು ಪ್ರಸಿದ್ಧನಾದ ಪರಮೇಶ್ವರನ ಮಹೋತ್ಸವಕ್ಕಾಗಿ ಬಂದು ನೆರೆದಿರುವ ತಮ್ಮೊಡನೆ ಹೀಗೆ ವಿಜ್ಞಾಪಿಸಿಕೊಳ್ಳುವೆನು. ಪೂಜ್ಯರಾದ ತಾವೆಲ್ಲರೂ ನನ್ನ ಬಿನ್ನಹವನ್ನು ಲಾಲಿಸಬೇಕು—ಕಾಶ್ಯಪಗೋತ್ರೋತ್ಪನ್ನನೂ ವ್ಯಾಕರಣನ್ಯಾಯಮೀಮಾಂಸಾಶಾಸ್ತ್ರಗಳನ್ನು ಬಲ್ಲವನೂ ಜತುಕರ್ಣೀಪುತ್ರನೂ ಶ್ರೀಕಂಠನೆಂಬ ಹೆಸರುಳ್ಳವನೂ ಆದ ಭವಭೂತಿಯೆಂಬ ಮಹಾಕವಿಯಿರುವನಷ್ಟೆ;

**ಕಂ॥** ಉತ್ತಮಕವಿಯಿಾತಂ ವಿ-
ಪ್ರೋತ್ತಮನೆಂದಿರದೆ ವಾಣಿಯುವನಂ ಸಾರ- ॥
ಲ್ಯುತ್ತರರಾಮ ಚರಿತ್ರೆಯ
ನುತ್ತಮನಾಟಕಮನೊರೆದನದನಭಿನಯಿಪೆಂ ॥ ೨ ॥

ಕವಿವಿರಚಿತನಾಟಕಕಥಾಪ್ರಭಾವದಿಂದ ನಾನೀಗ ಅಯೋಧ್ಯಾಪಟ್ಟಣವಾಸಿಯೂ ಶ್ರೀರಾಮಚಂದ್ರನ ಪ್ರಜೆಯೂ ಆಗಿರುವೆನು. (ಎಂದು ಸುತ್ತಲೂ ನೋಡಿ) ಎಲ ಎಲಾ! ನಟನೇ! ಇದೇನು? ಪೂಜ್ಯನೂ ಪೌಲಸ್ತ್ಯ

ಕುಲಧೂಮಕೇತುವೂ ರಾಜಾಧಿರಾಜನೂ ಎನಿಸಿರುವ ಶ್ರೀರಾಮಚಂದ್ರನ ಪಟ್ಟಾಭಿಷೇಕಮಹೋತ್ಸವಕಾಲದಲ್ಲಿ ಹಗಲುರಾತ್ರಿಗಳೆನ್ನದೆ ಯಾವಾಗಲೂ ವಾದ್ಯಘೋಷದೊಡನೆ ಮಂಗಲಕಾರ್ಯಗಳು ನಡೆಯುತ್ತಿರುವ ಸಂತೋಷಸಮಯದಲ್ಲಿಯೂ ರಾಜಾಂಗಣಗಳಲ್ಲಿ ರಾಜದೂತರ ಸಂಚಾರಗಳು ಅಕಸ್ಮಾತ್ತಾಗಿ ಹೀಗೆ ತಡೆದುಹೋಗಲು ಕಾರಣವೇನು?

**ನಟ**—(ಪ್ರವೇಶಿಸಿ) ಭಾವ, ಶ್ರೀರಾಮಚಂದ್ರನಿಗೆ ಲಂಕಾಪುರದಲ್ಲಿ ನಡೆದ ಮಹಾಯುದ್ಧದಲ್ಲಿ ಸಹಾಯಮಾಡಿದ ಸುಗ್ರೀವಾದಿಕಪಿಶ್ರೇಷ್ಠರು, ವಿಭೀಷಣನೇ ಮೊದಲಾದ ರಾಕ್ಷಸೋತ್ತಮರು, ಸ್ವಾಮಿಸೇವೆಗಾಗಿ ದೇಶಾಂತರಗಳಿಂದ ಬಂದು ಸೇರಿದ ಶುದ್ಧಾತ್ಮರಾದ ಬ್ರಹ್ಮರ್ಷಿಗಳು, ರಾಜರ್ಷಿಗಳು ಎನ್ನದೆ ಸರ್ವರನ್ನೂ ಅವರವರ ಸ್ಥಾನಮಾನಗಳಿಗೆ ತಕ್ಕಹಾಗೆ ಭೋಜನಸನ್ಮಾನಾದ್ಯುಪಚಾರಗಳಿಂದ ಮನ್ನಿಸಿ ಕಳುಹಿಸಿಕೊಡುವ ಸಂಭ್ರಮದಿಂದಲೇ ಇಷ್ಟು ದಿನಗಳೂ ಕಳೆದುಹೋದುವು.

**ಸೂತ್ರ**—ಹೌದು; ಇದು ಸರಿಯಾದ ಕಾರಣವು.

**ನಟ**—ಅಷ್ಟು ಮಾತ್ರವಲ್ಲದೆ, ಮತ್ತೊಂದು ಕಾರಣವೂ ಇರುವುದು—

**ಕಂ॥** ವಸುಧೇಂದ್ರನ ತಾಯಂದಿರ್
ಕೌಸಲ್ಯಾದ್ಯರ್ವಸಿಷ್ಠನಾಜ್ಞಾಪನೆಯಿಂ।
ಒಸೆಯುತರುಂಧತಿಯೊಡನಿರ
ಲಸಮಾನದ ಯಜ್ಞಕಳಿಯನಲ್ಲಿಗೆ ಪೋದರ್ ॥ ೩ ॥

**ಸೂತ್ರ**—ನಾನು ಪರದೇಶದವನಾದುದರಿಂದ ಕೇಳುವೆನು—ಅಳಿಯನೆಂಬವನಾವನು?

**ನಟ—ಕಂ॥** ಸೆನೆಯಾ! ದಶರಥಭೂಪಂ
ತನಯಳನಾಶಾಂತೆಯೆಂಬಳಂ ಪಡೆದಿರ್ದಂ।
ನಿನಗೀಸುತೆ ಮಗಳಾಗಿರ
ಲೆನುತವಳಂ ರೋಮಪಾದಭೂಪಂಗಿತ್ತಂ॥ ೪ ॥

ವಿಭಂಡಕಮುನಿಪುತ್ರನಾದ ಋಷ್ಯಶೃಂಗನು ಅವಳನ್ನು ಮದುವೆಮಾಡಿಕೊಂಡನು. ಆತನೀಗ ಹನ್ನೆರಡು ವರುಷಗಳಲ್ಲಿ ಮುಗಿಯತಕ್ಕ ಮಹಾ

ಯಜ್ಞವನ್ನು ಕೈಗೊಂಡಿರುವನು. ಆದುದರಿಂದ ಪೂರ್ಣಗರ್ಭಿಣಿ ಯಾಗಿದ್ದರೂ ಸೊಸೆಯಾದ ಸೀತೆಯನ್ನು ಬಿಟ್ಟು ಕೌಸಲ್ಯೆ ಮೊದಲಾದ ಹಿರಿಯರೆಲ್ಲರೂ ಅಳಿಯನಾದ ಋಷ್ಯಶೃಂಗನ ಆಶ್ರಮಕ್ಕೆ ಹೊರಟು ಹೋಗಿರುವರು.

**ಸೂತ್ರ**— ಇಂತಹ ರಾಜಬಾಂಧವ್ಯವಿಚಾರದಿಂದ ನಮಗೇನು? ಹೋಗೋಣ ಬಾ! ನಮ್ಮ ಜಾತಿಪದ್ಧತಿಯಂತೆ ರಾಜದ್ವಾರದಲ್ಲಿ ಕಾದು ಕೊಂಡಿರೋಣ.

**ನಟ**— ಭಾವ, ನಾವು ಮಹಾರಾಜನಾದ ರಾಮಚಂದ್ರನ ದರ್ಶನಾ ಪೇಕ್ಷಿಗಳಾಗಿ ರಾಜದ್ವಾರದಲ್ಲಿ ಕಾದುಕೊಂಡಿರಬೇಕಾದ ಕಾರಣ ಶಬ್ದ ಗುಣಗಳಿಂದಲೂ ಅರ್ಥಗಾಂಭೀರ್ಯದಿಂದಲೂ ಕೂಡಿ ಹೃದಯಂಗಮ ವಾಗುವಂತಹ ಸ್ತುತಿಪಾಠವನ್ನು ನನಗೆ ಹೇಳಿಕೊಡಬೇಕು.

**ಸೂತ್ರ**— ಭಾವ!

**ಕಂ॥** ಎಂತುಂ ವ್ಯವಹರ್ತವ್ಯಮ
ದೆಂತುಂ ನಿರ್ದುಷ್ಟಮೆನಿಸದಾ ವ್ಯವಹೃತಿ! ಸೀ– ।
ಮಂತಿನಿಯರ ಸಾಧುತ್ವದೊ
ಳೆಂತಂತೆಯೆ ಮಾತಿನಲ್ಲಿ ಜನದೌರ್ಜನ್ಯಂ ॥ ೫ ॥

**ನಟ**— ಜನರ ದೌಷ್ಟ್ಯವು ಬಹಳವೆಂದೇ ಹೇಳಬೇಕು. ಯಾಕೆಂ ದರೆ—

**ಕಂ॥** ಜನಕನ ಸುತೆಗಾದೇವಿಗೆ
ಜನಮಿರದಪವಾದವೆಂಗುಮಾ ರಾಕ್ಷಸನಾ ।
ಮನೆಯಲ್ಲಿರ್ದುದರಿಂ! ಪಾ–
ವನೆಯಿವಳೆಂದಗ್ನಿ ನುಡಿದುದರಿಯದೆಯಕಟಾ ॥ ೬ ॥

**ಸೂತ್ರ**— ಈ ವಾರ್ತೆಯು ಮಹಾರಾಜನ ವರೆಗೂ ಹರಡುವುದಾ ದರೆ ಪ್ರಮಾದವೇ ಸಂಭವಿಸುವುದು.

**ನಟ**— ಹಾಗೆ ಏನಾದರೂ ಸಂಭವಿಸಿದರೆ ಮಹಾತ್ಮರಾದ ಋಷಿ ಗಳೂ ದೇವತೆಗಳೂ ಕ್ಷೇಮವನ್ನು ಉಂಟುಮಾಡದೆ ಬಿಡಲಾರರು. (ಎಂದು ತಿರುಗಿ ನೋಡಿ) ಅಯ್ಯಾ ಜನರೇ! ಈಗ ಮಹಾರಾಜನೆಲ್ಲಿರುವನು? (ಕಿವಿಗೊಟ್ಟು ಕೇಳಿ) ಜನರು ಹೀಗೆನ್ನುವರು–

— ಮತ್ತೇಭವಿಕ್ರೀಡಿತ —

ದಿನಮುಂ ನಂದಿನಿ ತೋಷದಿಂ ಸಮಯಮಂ ಪೋಗಿಪ್ಪವೊಲ್ಗೆಯ್ಯುತುಂ
ಜನಕಂ ಬಲ್ದಿವಸಂಗಳಿರ್ದು ಮಿಥಿಲಾಪ್ರಾಂತಕ್ಕೆ ಪೋದಂ ಗಡಾ ।
ಮನದೊಳ್ಕುಂದುವ ಸೀತೆಯಂ ನಿರುಕಿಸುತ್ತುಂ ಸಾಂತ್ವನಂಗೆಯ್ವೆನಿ-
ನ್ನೆನುತಾಸ್ಥಾನದಿನೆಳ್ದು ರಾಮನದೊ ತಾನಂತಃಪುರಂಬೊಕ್ಕಪಂ ॥ ೭ ॥

(ಎಂದು ಹೊರಟುಹೋಗುವರು)

## ಇಂತಿದು ಪ್ರಸ್ತಾವನೆ

(ಬಳಿಕ ಕುಳಿತಿರುವ ಸೀತಾರಾಮರ ಪ್ರವೇಶವು)

**ರಾಮ**—ದೇವಿ ವೈದೇಹಿ, ಸಮಾಧಾನಹೊಂದು! ಆ ಗುರು ಜನರು ನಮ್ಮನ್ನು ಬಿಟ್ಟುಹೋಗಲು ಸಮರ್ಥರಾಗುವುದಿಲ್ಲ. ಆದರೆ—

**ಕಂ॥** ಇನಿಯಳೆ ಕರ್ಮದ ನಿಯಮಂ
ಮನುಜಸ್ವಾತಂತ್ರ್ಯಮಂ ಕೆಡಿಪ್ಪುದು ಸತತಂ ।
ಘನಪ್ರಾಯಶ್ಚಿತ್ತಾದಿಗ
ಳನಿತಿರ್ಪುದರಿಂ ಗೃಹಸ್ಥಧರ್ಮಂ ಕಷ್ಟಂ ॥ ೮ ॥

**ಸೀತೆ**—ಆರ್ಯಪುತ್ರನು ಹೇಳಿದುದೆಲ್ಲವೂ ಸರಿಯೆ; ಆದರೆ ಬಂಧು ವಿಯೋಗಗಳು ವಿಶೇಷವಾಗಿ ಸಂತಾಪವನ್ನು ಉಂಟುಮಾಡುತ್ತಿವೆ.

**ರಾಮ**—ಪ್ರಿಯೆ, ಹೌದು. ಈ ಬಗೆಯ ಸಂಸಾರಧರ್ಮಗಳು ಹೃದಯಮರ್ಮಚ್ಛೇದಿಗಳು. ಆದುದರಿಂದಲೇ ಜ್ಞಾನಿಗಳು ನಾನಾ ಕ್ಲೇಶದಾಯಕಗಳಾದ ಇಂತಹ ಸಂಸಾರಧರ್ಮಗಳಿಗೆ ಹೇಸಿ ವಿಷಯಾದಿ ಸುಖಗಳನ್ನು ತೊರೆದು ಅರಣ್ಯದಲ್ಲಿ ವಿಶ್ರಾಂತಿಪಡೆಯುತ್ತಾರೆ.

**ಕಂಚುಕಿ**—(ಪ್ರವೇಶಿಸಿ) ರಾಮಭದ್ರನೆ—(ಎಂದು ಅರ್ಧೋಕ್ತಿಯಲ್ಲೀ ಭಯಚಕಿತನಾಗಿ) ಮಹಾರಾಜನೆ—

**ರಾಮ**—(ಮಂದಹಾಸದೊಡನೆ) ಆರ್ಯನೆ, ಬಹುಕಾಲದಿಂದಲೂ ಮಹಾರಾಜನಾದ ನಮ್ಮ ತಂದೆಗೆ ಸೇವಕನಾಗಿ ವೃದ್ಧನಾಗಿರುವ ನೀನು ನನ್ನನ್ನು "ರಾಮಭದ್ರನೆ" ಎಂದು ಸಂಬೋಧಿಸುವುದೇ ಮೇಲು. ಈ ವರೆಗೆ ನೀನು ಮಾಡಿಕೊಂಡಿರುವ ಅಭ್ಯಾಸದಂತೆಯೇ ಹೇಳಿಕೊಳ್ಳ ಬಹುದು.

**ಕಂಚುಕಿ**—ಒಡೆಯನೇ, ಋಷ್ಯಶೃಂಗಾಶ್ರಮದಿಂದ ಅಷ್ಟಾವಕ್ರನು ಬಂದಿರುವನು.

**ಸೀತೆ**—ಹಾಗಾದರೆ ವಿಳಂಬವೇಕೆ?

**ರಾಮ**—ಬೇಗನೆ ಬರಮಾಡು.

**ಕಂಚುಕಿ**—ಹಾಗೆಯೇ ಆಗಲಿ (ಎಂದು ಹೊರಟುಹೋಗುವನು)

**ಅಷ್ಟಾವಕ್ರ**—(ಪ್ರವೇಶಿಸಿ) ನಿಮಗೆ ಶುಭವಾಗಲಿ!

**ರಾಮ**—ಪೂಜ್ಯರೆ, ಅಭಿವಂದಿಸುವೆನು (ಎಂದು ನಮಸ್ಕರಿಸಿ) ಈ ಆಸನವನ್ನು ಅಲಂಕರಿಸಬೇಕು.

**ಸೀತೆ**—ಪೂಜ್ಯರ ಅಡಿಗಳಿಗೆ ಎರಗಿಕೊಳ್ಳುವೆನು (ಎಂದು ಹಾಗೆಯೇ ಮಾಡಿ) ಅಳಿಯನಾದ ಋಷ್ಯಶೃಂಗಮುನಿಯೊಂದಿಗೆ ನಮ್ಮ ಗುರುಜನ ರೆಲ್ಲರೂ ಸುಕ್ಷೇಮಿಗಳಾಗಿರುವರಷ್ಟೆ? ಅತ್ತಿಗೆಯವರಾದ ಶಾಂತಾದೇವಿ ಯವರಿಗೆ ಕುಶಲವಷ್ಟೆ?

**ರಾಮ**—ಪೂಜ್ಯನಾಗಿರುವ ನಮ್ಮ ಭಾವ ಋಷ್ಯಶೃಂಗಮುನಿಯು ನಮ್ಮ ಅಕ್ಕನಾದ ಶಾಂತಾದೇವಿಯೊಂದಿಗೆ ನಿರ್ವಿಘ್ನವಾಗಿ ಮಹಾಯಜ್ಞ ದಲ್ಲಿ ಸೋಮಪಾನಮಾಡುತ್ತಿರುವನಷ್ಟೆ?

**ಸೀತೆ**—ಅವರೆಲ್ಲರೂ ನಮ್ಮನ್ನು ಸ್ಮರಿಸಿಕೊಳ್ಳುವರೇನು?

**ಅಷ್ಟಾವಕ್ರ**—(ಆಸನದಲ್ಲಿ ಕುಳಿತುಕೊಂಡು) ಹೌದು. ದೇವಿ, ನಿಮ್ಮ ಕುಲಗುರುವಾದ ಭಗವಾನ್ ವಸಿಷ್ಠಮಹರ್ಷಿಯು ನಿನ್ನನ್ನು ಕುರಿತು—

**ಕಂ॥** ವಸುಧೆಯೆ ನಿನ್ನಂ ಪಡೆದವ
ಳೆಸೆವಾ ಬ್ರಹ್ಮಂಗೆ ಸಮನೆ ಜನಕಂ ಜನಕಂ ।

ಜಸವಾಂತಿನನವೊಲಾನುಂ
ಪೆಸರಾಂತವನೀಶಕುಲಕೆ ಗುರುವಿರೆ ಸೊಸೆ ನೀಂ ॥ ೯ ॥

ಹೀಗಿರಲು ನಾನು ನಿನಗೆ ಬೇರೆ ಏನೆಂದಾಶೀರ್ವದಿಸಲಿ? ಮಗಳೇ ನೀನು ವೀರಪ್ರಸವಿನಿಯಾಗು! ಎಂದು ಹೇಳಿರುವನು.

**ರಾಮ** — ಅನುಗೃಹೀತರಾದೆವು.

**ಕಂ॥** ಮನದೊಳ್ಗೋಚರಿಪರ್ಥವ
ನನುಸರಿಪುದು ಲೋಗರಾಡುವ ವ್ಯವಹಾರಂ ।
ಮುನಿವರ್ಯರ ವಚಮಂ ಬಿಡ-
ದನುಸರಿಪುದು ನಿಶ್ಚಿತಾರ್ಥಮದು ಕೇವಲಮೇ? ॥ ೧೦ ॥

**ಅಷ್ಟಾವಕ್ರ** — ಪೂಜ್ಯಳಾದ ಅರುಂಧತೀದೇವಿಯೂ, ಮಾತೃಶ್ರೀಗಳಾದ ಕೌಸಲ್ಯಾದೇವಿ ಮುಂತಾದ ಮಹಾರಾಜಪತ್ನಿಯರೂ, ಸಹೋದರಿಯಾದ ಶಾಂತಾದೇವಿಯೂ ಕೂಡ ನಿನ್ನನ್ನು ಕುರಿತು ಬಾರಿಬಾರಿಗೂ— "ನಮ್ಮ ವಾತ್ಸಲ್ಯಕ್ಕೆ ಪಾತ್ರಳಾದ ಸೀತೆಯು ಗರ್ಭಿಣಿಯಾಗಿರುವುದರಿಂದ ಬಯಕೆಗಳನ್ನೇನಾದರೂ ತಿಳಿಸಿಕೊಂಡರೆ ಅವನ್ನು ಕೂಡಲೆ ನೆರವೇರಿಸಬೇಕು" ಎಂದು ಆಜ್ಞಾಪಿಸಿರುವರು.

**ರಾಮ** — ಅಭೀಷ್ಟಗಳನ್ನೇನಾದರೂ ತಿಳಿಸಿಕೊಂಡರೆ ತಪ್ಪದೆ ಅವೆಲ್ಲವನ್ನೂ ಪೂರೈಸುವೆವು.

**ಅಷ್ಟಾವಕ್ರ** — ಅತ್ತಿಗೆಯಾದ ಶಾಂತಾದೇವಿಯ ಗಂಡನಾದ ಋಷ್ಯಶೃಂಗಮುನಿಯು ನಿನ್ನನ್ನು ಕುರಿತು— "ಮಗಳೇ ನೀನು ಪೂರ್ಣಗರ್ಭಿಣಿಯಾಗಿರುವುದರಿಂದ ನಾವು ನಿನ್ನನ್ನು ಯಜ್ಞಕ್ಕೆ ಕರೆತರಲಿಲ್ಲ. ಮಾತ್ರವಲ್ಲದೆ, ನಿನ್ನ ಮನಸ್ಸಿಗೆ ಬೇಸರವುಂಟಾಗದಂತೆ ಸಮಾಧಾನಗೊಳಿಸುವುದಕ್ಕಾಗಿ ಚಿರಂಜೀವಿಯಾದ ರಾಮಚಂದ್ರನನ್ನು ಅಲ್ಲಿ ನಿನ್ನೊಂದಿಗೆ ಇರುವಂತೆ ಆಜ್ಞಾಪಿಸಿರುವೆವು. ಆದುದರಿಂದ ಪುತ್ರಪೂರ್ಣೋತ್ಸಂಗವುಳ್ಳ ಆಯುಷ್ಮತಿಯನ್ನು ನಾವು ನೋಡುವೆವು" ಎಂದು ಆಜ್ಞಾಪಿಸಿರುವನು.

**ರಾಮ** — (ಉತ್ಸಾಹ ಮಂದಹಾಸ ಲಜ್ಜೆಗಳೊಡನೆ) ಹಾಗೆಯೇ ಆಗಲಿ!

ಪೂಜ್ಯರಾದ ವಸಿಷ್ಠಮುನಿಗಳು ನನ್ನನ್ನು ಕುರಿತು ಏನೂ ಆಜ್ಞಾಪಿಸ ಲಿಲ್ಲವೆ?

**ಅಷ್ಟಾವಕ್ರ**— ಕೇಳಬೇಕು—

— ಮತ್ತೇಭವಿಕ್ರೀಡಿತ —

ಪಿರಿಯರ್ಯಜ್ಞಕೆ ಬಂದೆವೆಲ್ಲರುಳಿಯುತ್ತಲ್ಲಿಂದೆ! ನೀಂ ರಾಘವಾ
ಕಿರಿಯಂ! ನೂತನರಾಜ್ಯಮಂ ಪೊರೆಯುವೇಳ್ಕುಂ ಶ್ರದ್ಧೆಯಿಂದಾವಗಂ।
ಅರಿತಾ ಲೋಗರಯೇಳ್ಗೆ ತನ್ನ ಗುರಿಯೆಂದೆಂಬರ್ಥಮಂ ಚಿತ್ತದೊಳ್
ಪೊರೆಯಲ್ಕೀರ್ತಿವಿತಾನಮಂ ಪಡೆವೆನೀನಾದಿವ್ಯಮಂ ವಿತ್ತಮಂ ॥ ೧೧ ॥

**ರಾಮ**— ಪೂಜ್ಯಗುರುಗಳ ಅನುಜ್ಞೆಯಂತೆಯೇ ನಡಕೊಳ್ಳುವೆನು

**ಕಂ॥** ಕರುಣೆಯುನೋ ನೇಹಮುನೋ
ನೆರೆ ಸುಖಮುನೊ ಕೊನೆಗೆ ಜಾನಕೀದೇವಿಯುನೋ।
ಧರೆಯಂ ಪೊರೆವುದಕಾಗಿಯೆ
ತೊರೆವುದಕಂ ರಾಮನಿಂದು ದುಃಖಿಸಲಾರಂ ॥ ೧೨ ॥

**ಸೀತೆ**— ಆದುದರಿಂದಲೇ ಆರ್ಯಪುತ್ರನು ರಾಘವಧುರಂಧರನು.

**ರಾಮ**— ಯಾರಲ್ಲಿ ಪರಿಜನರು? ಪೂಜ್ಯನಾದ ಅಷ್ಟಾವಕ್ರನನ್ನು ಕರಕೊಂಡು ಹೋಗಿ ವಿಶ್ರಾಂತಿಹೊಂದಿಸಿರಿ!

**ಅಷ್ಟಾವಕ್ರ**—(ಎದ್ದುನಿಂತು ತಿರುಗಿ ನೋಡಿ) ಓಹೋ! ಚಿರಂಜೀವಿಯಾದ ಲಕ್ಷ್ಮಣನು ಬಂದನು (ಎಂದು ಹೇಳುತ್ತ ಹೊರಟು ಹೋಗುವನು).

**ಲಕ್ಷ್ಮಣ**—(ಪ್ರವೇಶಿಸಿ) ಆರ್ಯನಿಗೆ ಜಯವಾಗಲಿ! ಜಯವಾಗಲಿ! ಆರ್ಯನೇ, ಅರ್ಜುನನೆಂಬ ಚಿತ್ರಕಾರನು ನಮ್ಮ ಆಜ್ಞೆಯ ಮೇರೆಗೆ ರಾಣೀವಾಸದ ಈ ಬೀದಿಯಲ್ಲಿ ಆರ್ಯನ ಚರಿತ್ರೆಯನ್ನು ಬಹುರಮಣೀಯವಾಗಿ ಬರೆದಿರುವನು. ಅದನ್ನು ಸ್ವಾಮಿಯು ನೋಡಬೇಕು.

**ರಾಮ**— ವತ್ಸ, ವ್ಯಸನಪಡುತ್ತಿರುವ ದೇವಿಯನ್ನು ವಿನೋದಗೊಳಿಸುವುದರಲ್ಲಿ ಬಲ್ಲವನಾಗಿರುವೆ. ಅದು ಎಲ್ಲಿಯ ತನಕ ಬರೆಯಲ್ಪಟ್ಟಿರುವುದು?

**ಲಕ್ಷ್ಮಣ**—ದೇವಿಯ ಅಗ್ನಿಶುದ್ಧಿಪರ್ಯಂತವೂ.

**ರಾಮ**—ಪಾಪವು ಪರಿಹಾರವಾಗಲಿ! (ಸೀತೆಯನ್ನು ಸಮಾಧಾನ ಪಡಿಸುತ್ತ)—

**ಕಂ॥** ಆಜನ್ಮಶುದ್ಧಳೆನಿಸಿ
ಪೀಜನಕಜೆಗಿತರರಿಂದೆಪರಿಶುದ್ಧಿಯದೇಂ? ।
ತೇಜಸ್ತೀರ್ಥಜಲಂಗಳ
ನೀಜಗದೊಳ್ ಶುದ್ಧಿಗೊಳಿಪುವಾವುವೊ ಬಗೆಯಲ್ ॥ ೧೩ ॥

ಯಜ್ಞಭೂಮಿಯಲ್ಲಿ ಜನಿಸಿದ ದೇವಿ ಪ್ರಸನ್ನಳಾಗು! ಜೀವಿತಾವಧಿ ಪರ್ಯಂತವೂ ನಿನಗೀ ಪ್ರಮಾದವೆ?

ಮಾಲಿನಿ॥ ವ್ಯಸನಿಯ ಮನಮುಂ ರಂಜಿಪ್ಪುದೇ ಮಾನುಷತ್ವಂ
ಸಸಿನೆ ನಿನಗೆ ಪೇಳ್ದೆಮ್ಮುಕ್ತಿಯುಕ್ಷಮ್ಯಮೆಂತುಂ ।
ಎಸೆವ ಕುಸುಮಮುಂ ಕೊಂಡೆತ್ತಿಸೂಡಲ್ಕನೋಜ್ಞಂ
ಬಿಸುಟು ಚರಣದಿಂದಂ ತಾಡಿಸಲ್ಪಾರದೆಂದುಂ॥ ೧೪ ॥

**ಸೀತೆ**—ಆರ್ಯಪುತ್ರನೆ, ಅದು ಹಾಗಿರಲಿ! ಈಗ ಬರೆದಿರುವ ನಿನ್ನ ಚರಿತ್ರೆಯನ್ನು ನೋಡೋಣ. (ಎಂದು ಹೇಳುತ್ತ ಎದ್ದು ತಿರುಗುವರು).

**ಲಕ್ಷ್ಮಣ**—ಇದೇ ಆ ಚಿತ್ರರಚನೆಯು.

**ಸೀತೆ**—(ಸರಿಯಾಗಿನೋಡಿ) ಅದೋ ಮೇಲ್ಭಾಗದಲ್ಲಿ ನಿರಂತರವಾಗಿ ನಿಂತುಕೊಂಡು ಆರ್ಯಪುತ್ರನನ್ನು ಕುರಿತು ಸ್ತುತಿಸುತ್ತಿರುವಂತೆ ಬರೆಯಲ್ಪಟ್ಟಿರುವರಲ್ಲ! ಅವರಾರು?

**ಲಕ್ಷ್ಮಣ**—ದೇವಿ, ಅವರು ಪರಮರಹಸ್ಯಗಳಾದ ಜೃಂಭಕಾಸ್ತ್ರಗಳ ಅಧಿದೇವತೆಗಳು. ಮೊದಲು ಭೃಶಾಶ್ವನೆಂಬ ಮಹಾಮುನಿಯು ಈ ಅಸ್ತ್ರಗಳನ್ನು ವಿಶ್ವಾಮಿತ್ರನಿಗೆ ಉಪದೇಶಿಸಿದನು. ತಾಟಕಾಸಂಹಾರ ಕಾಲದಲ್ಲಿ ಆತನು ಅಣ್ಣನಿಗೆ ಉಪದೇಶಮಾಡಿದನು.

**ರಾಮ**—ಪ್ರಿಯೆ, ಆ ದಿವ್ಯಾಸ್ತ್ರಗಳಿಗೆ ಭಕ್ತಿಪೂರ್ವಕವಾಗಿ ವಂದಿಸು.

ಉಪಜಾತಿ॥ ಬ್ರಹ್ಮಾದಿಪುರಾತನಗುರುವರ್ಗಂ
ಬ್ರಹ್ಮಹಿತಕ್ಕೆಯೆ ನಿರವಧಿಕಾಲಂ ।
ಒವರ್ಮಾನಸದಿಂ ತಪವೆಸಗುತ್ತುಂ
ಬ್ರಹ್ಮಶರಂಗಳ ಪರಿಜಿಗೆ ಬಂದರ್ ॥ ೧೫ ॥

ಸೀತೆ— ದಿವ್ಯಾಸ್ತ್ರಗಳ ಅಧಿದೇವತೆಗಳಿಗೆ ವಂದನೆಯು (ಎಂದು ನಮಸ್ಕರಿಸುವಳು).

ರಾಮ— ಪ್ರಿಯೆ, ಅವು ನಿನ್ನ ಸಂತತಿಯನ್ನು ಹೊಂದದಿರಲಾರವು.

ಸೀತೆ— ಅನುಗೃಹೀತಳಾದೆನು.

ಲಕ್ಷ್ಮಣ— ಇದು ಮಿಥಿಲಾನಗರದಲ್ಲಿ ನಡೆದ ವೃತ್ತಾಂತವು.

ಸೀತೆ— ಓಹೋ! ಇಲ್ಲಿ ಈಗ ತಾನೇ ಅರಳಿದ ನೀಲೋತ್ಪಲ ಮಾಲೆಯಂತೆ ಶ್ಯಾಮಲವೂ ಸ್ನಿಗ್ಧಮಾಂಸಲವೂ ಆದ ದೇಹಸೌಭಾಗ್ಯವುಳ್ಳವನೂ, ಆಶ್ಚರ್ಯದೊಡನೆ ತಂದೆಯವರಿಂದ ನಿರೀಕ್ಷಿಸಲ್ಪಡುವ ಸೌಂದರ್ಯಸಂಪತ್ತುಳ್ಳವನೂ, ಲೀಲಾಮಾತ್ರದಿಂದಲೇ ಭಂಗಿಸಲ್ಪಟ್ಟ ಹರನ ದಿವ್ಯಧನುಸ್ಸುಳ್ಳವನೂ, ಕಾಕಪಕ್ಷಗಳಿಂದ ಅಲಂಕೃತವಾದ ಮುಖಮಂಡಲವುಳ್ಳವನೂ, ಆಗಿರುವ ಆರ್ಯಪುತ್ರನು ಚಿತ್ರಿತನಾಗಿ ತೋರುತ್ತಿರುವನಲ್ಲಾ!

ಲಕ್ಷ್ಮಣ— ಆರ್ಯೆ, ನೋಡು! ನೋಡು—

ಕಂ॥ ಜನಕಂ ನೇಹದೆ ಬಾಂಧವ
ಜನರಂ ಮನ್ನಿಪ ಮಹೋತ್ಸವಂ ತೋರ್ಕುಮದೋ ।
ಜನಕಪುರೋಹಿತಗೌತಮ
ನನುಗೊಳಿಪಂ ಪೂಜೆಯಂ ವಸಿಷ್ಠಾದ್ಯರ್ಗಂ ॥ ೧೬ ॥

ರಾಮ— ಇದು ಬಹುಯೋಗ್ಯವಾಗಿರುವುದು—

ಮಾಲಿನಿ॥ ಜನಕರಘುಜರೈಕ್ಯಕ್ಕಾದ ಸಂಬಂಧಮೊಂದುಂ
ಜನರ ಬಗೆಯನೇ ಸಂತುಷ್ಟಿಯಿಂ ಪೂರಿಪಂದಂ ।
ಕೊನೆದು ಕುಶಿಕಜಾತಂ ದಾತನುಂ ಕೊಳ್ವನುಂ ಮೇ—
ಣೆನೆ ಪರಿಣಯಮೆಂತುಂ ಭದ್ರಮಾಗಲ್ಕೆವೇಡಾ?
॥ ೧೭ ॥

ಸೀತೆ—ಗೋದಾನವೆಂಬ ಶುಭಕರ್ಮವನ್ನಾಚರಿಸಿ ವಿವಾಹ ದೀಕ್ಷಿತರಾಗಿ ಸೋದರರೊಂದಿಗೆ ಇಲ್ಲಿ ಶೋಭಿಸುತ್ತಿರುವವರು ನೀವಲ್ಲವೆ? ನಾನೀಗಲೂ ಅಲ್ಲಿರುವಂತೆಯೇ ಭಾವಿಸಿಕೊಳ್ಳುವೆನು.

ರಾಮ—ಅಷ್ಟುಮಾತ್ರವಲ್ಲದೆ, ನಲ್ಲೆ—

— ಉತ್ಪಲಮಾಲೆ —

ಅಂದು ವಿವಾಹಮಂಡಪದೊಳರ್ಚಿಸಿ ಗೌತಮನಾ ಪುರೋಹಿತಂ
ಸುಂದರಕಂಕಣಾಭಿರಮಣೀಯಕಮಾಗಿರಲಾವ ಹಸ್ತಮಂ ।
ಅಂದದೊಳೆತ್ತಿಕೊಟ್ಟ ಪರಿಯಿಂ ಪಡೆದೆನ್ನಮನಂ ಪ್ರಮೋದಮಂ
ಕುಂದದೆ ಪೂರ್ದಿದತ್ತೊ ದಲದೇ ಕರಮಂ ಪಿಡಿದಿರ್ಪೆ ನೀಗಳುಂ ॥ ೧೮ ॥

ಲಕ್ಷ್ಮಣ—ಇದೋ, ಇಲ್ಲಿ ದೇವಿಯು! ಇವಳೇ ಪೂಜ್ಯಳಾದ ಮಾಂಡವಿಯು! ಇವಳೇ ವಧುವಾದ ಶ್ರುತಕೀರ್ತಿಯು.

ಸೀತೆ—ವತ್ಸ, ಬೇರೆ ಇಲ್ಲಿರುವಳಲ್ಲಾ! ಇವಳಾವಳು?

ಲಕ್ಷ್ಮಣ— (ಮಂದಹಾಸಲಜ್ಜೆಗಳೊಡನೆ ತಿರುಗಿಕೊಂಡು ಸ್ವಗತಂ) ಓಹೋ, ದೇವಿಯು ಊರ್ಮಿಳೆಯನ್ನು ಕೇಳುತ್ತಿರುವಳು. ಆಗಲಿ, ಬೇರೆ ಕಡೆಕಾಗಿ ಕರಕೊಂಡು ಹೋಗುವೆನು (ಪ್ರಕಾಶಂ) ದೇವಿ, ಅದಂತಿರಲಿ! ಇನ್ನೂ ನೋಡತಕ್ಕದ್ದು ಬಹಳವಿದೆ. ಇವನೇ ಭಗವಾನ್ ಭಾರ್ಗವನು.

ಸೀತೆ—(ಸಂಭ್ರಮದೊಡನೆ) ಆಹಾ! ಭಯವಾಗುವುದು.

ರಾಮ—ಋಷಿಪುಂಗವನೆ, ವಂದಿಸಿಕೊಳ್ಳುವೆನು.

ಲಕ್ಷ್ಮಣ—ದೇವಿ, ನೋಡು! ಆರ್ಯನು ಇವನನ್ನು— (ಎಂದು ಅರ್ಧೋಕ್ತಿಯಲ್ಲೇ)

ರಾಮ— (ಆಕ್ಷೇಪಿಸುತ್ತ) ವತ್ಸ, ಇನ್ನೂ ನೋಡಬೇಕಾದುದು ಬಹಳವಾಗಿರುವುದು. ಮುಂದೆ ಕರಕೊಂಡುಹೋಗಿ ತೋರಿಸು.

ಸೀತೆ— (ಪ್ರೇಮಗೌರವಗಳೊಡನೆ ನೋಡುತ್ತ) ಆರ್ಯಪುತ್ರನೇ, ನೀನು ವಿನಯಬಾಹುಳ್ಯದಿಂದ ಚೆನ್ನಾಗಿ ಶೋಭಿಸುವೆ.

ಲಕ್ಷ್ಮಣ—ನಾವೆಲ್ಲರೂ ಅಯೋಧ್ಯೆಯನ್ನು ಸೇರಿದೆವು.

**ರಾಮ**—(ಕಂಬನಿಗರೆಯುತ್ತ) ಆ ಸವಿದಿನಗಳನ್ನು ನಾನು ಮರೆಯ ಲುಂಟೆ?

**ಕಂ॥** ವಸುಧೆಯು ನಮ್ಮಂ ಪೊರೆಯಲ್
ಪೊಸವೆಂಡಿರ ಕೂಟದಿಂದೆ ನಲಿದಂದೆಮ್ಮಂ।
ಪೊಸವಗೆಯಿಂದಂ ಮಾತೆಯು
ರೊಸೆದಾರಯ್ದಾ ದಿನಂಗಳೋಡಿದುವಕಟಾ ॥ ೧೯ ॥

ಜಾನಕಿ, ನಿನ್ನ ನೋಟವಾದರೂ ಆ ದಿನಗಳಲ್ಲಿ—

— ಮತ್ತೇಭವಿಕ್ರೀಡಿತ —

ವಿರಲಂ ಕುಡ್ಮಲದಂತೆ ದಂತಮಿನಿಸುಂ ಮೂಡಲ್ಕದೇ ಕಮ್ಮಲ
ರ್ದಿರಿದಂದಂ ಪೊಳೆದಿರ್ದ ವಕ್ತ್ರದರೆನೋಟಂ ಮುಗ್ಧಸಂಮೋಹಕಂ।
ಅರಿಯಲ್ಸುಂದರಶೈಶವಾವಯವಲಾಲಿತ್ಯಂ ಮದಂಗಂಗಳಂ
ಭರದಿಂ ಪೊರ್ದಿದ ಜೊನ್ನದಂತೆ ಸೆಳೆಯುತ್ತಿರ್ದಂದಮೇ ಕೌತುಕಂ
॥ ೨೦ ॥

**ಲಕ್ಷ್ಮಣ**—ಇದು ಮಂಥರಾವೃತ್ತಾಂತವು.

**ರಾಮ**—(ಥಕ್ಕನೆ ಬೇರೆ ಕಡೆಗಾಗಿ ತೋರಿಸುತ್ತ)

ರಥೋದ್ಧತೆ॥ ಅಂಗನಾಮಣಿ, ನಿಷಾದನಾ ಗುಹಂ
ಸಂಗಮಂ ಬಯಸಿ ಬಂದುದೆತ್ತಲಾ।
ಶೃಂಗಿವೇರಪುರದಲ್ಲಿ ಪೆರ್ಚಿ ತೋ—
ರ್ಪಿಂಗುದೀತರುವಿದೋ ವಿರಾಜಿಕುಂ ॥ ೨೧ ॥

**ಲಕ್ಷ್ಮಣ**—(ನಗುತ್ತ ಸ್ವಗತಂ) ಓಹೋ! ಅಣ್ಣನೀಗ ಮಧ್ಯಮಾಂಬೆ ಯಾದ ಕೈಕೇಯಿಯ ಸಂಗತಿಯನ್ನೇ ಮರೆಯಿಸಿಬಿಟ್ಟನು.

ಸೀತೆ—ಆಹಾ! ಇದೀಗ ನೀವು ಜಡೆಗಳನ್ನು ಧರಿಸಿಕೊಂಡ ಸಂಗತಿ ಯಲ್ಲವೆ?

**ಲಕ್ಷ್ಮಣ**—

ವಿಯೋಗಿನಿ॥ ಇನವಂಶದ ವೃದ್ಧರೆಲ್ಲರುಂ
ತನಯರ್ಗರ್ಪಿಸಿ ರಾಜ್ಯಭಾರಮಂ।

ವನವಾಸಕೆ ಪೋಪರಾರ್ಯೆ ನೀ
ನನಿತುಂ ಬಾಲ್ಯದೆ ಪೊಂದಿದ್ದೆಯದಂ ॥ ೨೨ ॥

ಸೀತೆ— ಪವಿತ್ರತೀರ್ಥೋದಕವುಳ್ಳ ಭಾಗೀರಥೀ ಪ್ರವಾಹವು ಇಲ್ಲಿ ಕಂಗೊಳಿಸುವುದು.

ರಾಮ— ರಘುಕುಲದೇವತೆಯಾದ ಗಂಗಾಮಾತೆ, ನಿನಗೆ ವಂದಿಸುವೆನು!

— ಚಂಪಕಮಾಲೆ —

ಸಗರನ ಯಜ್ಞದಶ್ವವ ಪುಡುಂಕುತೆ ಕಾಣದಿರಲ್ಕೆ ಭೂಮಿಯಂ
ಬಗಿದು ಪುಗುತ್ತುಮಾ ಕಪಿಲಶಾಪದೆ ಬೆಂದಳಿವೋದರೆಲ್ಲರಂ।
ಬಗೆವಗೆಯಿಂದೆ ಕಷ್ಟತಪಮಾಚರಿಸುತ್ತೊಡನಾ ಭಗೀರಥಂ
ಭಗವತಿ ನಿನ್ನ ಪುಣ್ಯಜಲದಿಂ ಗತಿಯೊಂದಿಸಲೇಸು ಪೆರ್ಮೆಯೋ ॥ ೨೩ ॥

ಲೋಕಪಾವನೆಯಾದ ತಾಯೇ, ನೀನು ಸೊಸೆಯಾದ ಸೀತೆಯ ವಿಷಯದಲ್ಲಿ ಅರುಂಧತೀದೇವಿಯಂತೆ ಕ್ಷೇಮವನ್ನೇ ಬಯಸುತ್ತಿರಬೇಕು.

ಲಕ್ಷ್ಮಣ— ದೇವಿ, ಚಿತ್ರಕೂಟಪರ್ವತಕ್ಕೆ ಹೋಗುವ ದಾರಿಯಲ್ಲಿ ಯಮುನೆಯ ದಡದಲ್ಲಿ ಇರುವುದೆಂದು ಭರದ್ವಾಜಮುನಿಯು ಗುರುತಿಗಾಗಿ ತಿಳಿಸಿದ ಶ್ಯಾಮವೆಂಬ ವಟವೃಕ್ಷವು ಇಲ್ಲಿ ತೋರುವುದು.

(ರಾಮನು ಕುತೂಹಲದಿಂದ ನೋಡುವನು)

ಸೀತೆ— ಆರ್ಯಪುತ್ರನೇ, ನೀನು ಆ ಪ್ರದೇಶವನ್ನು ಸ್ಮರಿಸಿಕೊಳ್ಳುವೆಯೊ?

ರಾಮ— ಪ್ರಿಯೆ, ಅದನ್ನು ಮರೆಯುವುದುಂಟೆ?

— ಮಹಾಸ್ರಗ್ಧರೆ —

ಅನಿತುಂ ಸಂಚಾರದಿಂದಂ ಪ್ರಸರಣಕೊಡನಾಕುಂಚನಕ್ಕಂತಶಕ್ಯಂ
ತೊನೆದಾಡಲ್ಪಾರದಂದಂ ಜಡತೆಯಡಸೆ ಸಂವಾಹಮಂ ಗೆಯ್ದು ನಾಂ ತೊ—
ಟ್ಟನೆ ಮತ್ತಾಲಿಂಗಿಸಲ್ನಿನ್ನಯೆ ಮೃದಿತಮೃಣಾಲೀಸಮಾನಾಂಗಮಂ ತಂ
ದೆನತೀ ವಕ್ಷಃಸ್ಥಳಕ್ಕೊಂದಿಸಿ ಮಲಗಿರಲಂದಂತೆಯೇ ನಿದ್ದೆವೋದೌ
॥ ೨೪ ॥

ಲಕ್ಷ್ಮಣ—ದೇವಿ, ಇದು ವಿಂಧ್ಯಾರಣ್ಯದ ಮುಂದೆ ನಮಗೂ ವಿರಾಧನಿಗೂ ನಡೆದ ಸಂವಾದವು.

ಸೀತೆ—ಅದಂತಿರಲಿ! ಸ್ವಾಮಿಯು ತಾಳಪತ್ರನಿರ್ಮಿತವಾದ ಛತ್ರ ವನ್ನು ತನ್ನ ಕಯ್ಯಲ್ಲಿ ಹಿಡಿದುಕೊಂಡು ಭೀಕರವಾದ ದಂಡಕಾರಣ್ಯದಲ್ಲಿ ನನಗೆ ದಾರಿತೋರಿಸುತ್ತ ನಡೆದ ಕ್ರಮವನ್ನು ನೋಡುವೆನು.

ರಾಮ—ಪ್ರಿಯೆ, ಇಲ್ಲಿ ಪಾವನವಾದ ತಪೋವನವನ್ನು ನೋಡು—

— ಉತ್ಪಲಮಾಲೆ —

ಪಾವನಭೂಮಿಯಲ್ಲಿ ಪರಿದೆಯ್ದುವ ನಿರ್ಝರಿಣೀತಟಂಗಳ
ಲ್ಲಾವೆಡೆ ಭೂರುಹಂಗಳಡಿಯಲ್ಲಿ ಯಮೀಂದ್ರರ ವೃಂದಮಿರ್ಪುದೋ ।
ಆವೆಡೆ ಬರ್ಪ ಸಜ್ಜನರನಾದರಿಸಲ್ಕೆ ಗೃಹಸ್ಥರಿರ್ಪರೋ
ಸೋವಿದ ಧಾನ್ಯಮುಷ್ಟಿಪಚನಾವಸಥಂಗಳೊಳಿಂತಿದಾಶ್ರಮಂ ॥ ೨೫ ॥

ಲಕ್ಷ್ಮಣ—ದೇವಿ, ನೋಡಿದೆಯಾ? ಇದು ದಟ್ಟವಾದ ಮರದ ಗುಂಪುಗಳಿರುವುದರಿಂದ ಕಪ್ಪಾಗಿ ತೋರುವ ಮಹಾರಣ್ಯಗಳಿಂದ ವ್ಯಾಪ್ತವೂ, ಗೋದಾವರೀನದಿಯ ಘೋಷವನ್ನು ಪ್ರತಿಧ್ವನಿಗೆಯ್ಯುವ ಗುಹೆಗಳಿಂದ ಸಂಯುಕ್ತವೂ, ನಿರಂತರವಾಗಿ ಸುರಿಯುತ್ತಿರುವ ಮೇಘ ಗಳಿಂದ ಆವೃತವೆನಿಸಿ ಅತ್ಯಂತಶ್ಯಾಮಲವೂ ಆಗಿರುವ ಜನಸ್ಥಾನವೆಂಬ ದಂಡಕಾರಣ್ಯದ ಮಧ್ಯಭಾಗದಲ್ಲಿರುವ ಪ್ರಸ್ರವಣವೆಂಬ ಪರ್ವತವು.

ರಾಮ—ಲಲಿತಾಂಗಿ, ಆ ಸವಿದಿನಗಳನ್ನು ಮರೆಯಲು ಸಾಧ್ಯ ವಿಲ್ಲ— ✓

— ಶಾರ್ದೂಲವಿಕ್ರೀಡಿತ —

ಅಂದಾ ಪರ್ವತದಲ್ಲಿ ವಾಸಿಸೆ ಸದಾ ಸನ್ನದ್ಧನಾಗಿರ್ದು ತಾ
ನೆಂದುಂ ಲಕ್ಷ್ಮಣನೊಲ್ದು ಸೇವೆಯೆಸಗಲ್ಕಂದಂದಿನಾ ಸೌಖ್ಯಮಂ ।
ಮುಂದಂ ಮುಂದಮೆನಲ್ಕದೀಜಲದಿನೆಳ್ತಂದಿರ್ದ ನಾದಂಗಳಂ
ಮುಂದಾ ತೀರದೊಳೆಯ್ದಿದೆಮ್ಮಿರವುಮಂ ಚಿತ್ತಕ್ಕೆ ತಂದಪ್ಪೆಯೋ ॥ ೨೬ ॥

ಅಷ್ಟುಮಾತ್ರವಲ್ಲದೆ—

— ಸ್ರಗ್ಧರೆ —

ನೀರೇ ಗೋತ್ರೇಂದ್ರವುಂ ನೀಂ ಮುರಿವುದೆ ಬಗೆಯೌ! ಪರ್ಣದಾವಾಸದಲ್ಲಾ
ಮೋರಂತೊತ್ತೋರ್ಗಳ್ಗಳಿಂದಂ ಬಲದೆಪಿಡಿಯುತಾಲಿಂಗಿಸುತ್ತಿರ್ದರುಂ ಪ-।
ಟ್ಟೋರೊಂದಂ ಮೆಲ್ಲಮೆಲ್ಲಂ ರಹದಿರವುಮನಾಡುತ್ತೆ ಬಲ್ಲಂದದಿಂದಂ
ಸೇರಿರ್ದಂದಾತ್ರಿಯಾಮಂಜುಗುಳ್ದ ಬಗೆಯನೇ ಭಾವಿಸಲ್ಕಾರ್ತೆ ವೇಪೇಳ್
॥ ೨೭ ॥

ಲಕ್ಷ್ಮಣ—ದೇವಿ, ಇದು ಪಂಚವಟಿಯಲ್ಲಿ ನಡೆದ ಶೂರ್ಪಣಖಿಯ ವಿವಾದವು.

ಸೀತೆ—ಹಾ! ಪ್ರಾಣಕಾಂತ, ಇಷ್ಟರತನಕವೇ ನಿನ್ನ ದರ್ಶನವು.

ರಾಮ—ಅಗಲಿಕೆಯಿಂದ ಹೆದರಿದ ನಲ್ಲೇ, ಇದು ಚಿತ್ರವಲ್ಲವೇ?

ಸೀತೆ—[ಹೇಗಾದರೂ ಲೋಕದಲ್ಲಿ ದುರ್ಜನರಿಂದ ದುಃಖವುಂಟಾಗುವುದು.]

ರಾಮ—ಆಹಾ! ಜನಸ್ಥಾನದಲ್ಲಿ ನಡೆದ ವೃತ್ತಾಂತವು ಈಗಲೂ ನಡೆಯುತ್ತಿರುವಂತೆ ನನ್ನ ಮನಸ್ಸಿಗೆ ಭಾಸವಾಗುತ್ತಿದೆ.

ಲಕ್ಷ್ಮಣ—

— ಉತ್ಪಲಮಾಲೆ —

ಮಾಯದ ದುಷ್ಟಕರ್ಬುರರ ವಂಶವಿನಾಶಕೆ ಮೂಲಮಾದೊಡಂ
ಮಾಯದ ಪೊಮ್ಮಿಗಂ ಲಿಖಿತಮಾಗಿರೆಯುಂ ಮರುಗಿಪ್ಪುದಲ್ಲರಂ ।
ಮಾಯದ ಕೃತ್ಯದಿಂದೆ ವಿಕಲೇಂದ್ರಿಯನತ್ತಿರಲಾರ್ಯನಿಂದಿಗುಂ
ಬಾಯುಳಿದಂತೆ ರೋದಿಪುದು ಕಲ್ಲೊಡೆದಾವುರ್ದು ವಜ್ರದಂತರಂ ॥ ೨೮ ॥

ಸೀತೆ—(ಕಂಬನಿಗರೆಯುತ್ತ ಸ್ವಗತಂ) ಆಹಾ! ಕಷ್ಟವೆ! ಲೋಕಕ್ಕೇ ಆನಂದದಾಯಕನಾದ ಆರ್ಯಪುತ್ರನು ನನ್ನ ಸಲುವಾಗಿ ಹೀಗೂ ಮರುಗಿದನೆ?

ಲಕ್ಷ್ಮಣ—(ರಾಮನನ್ನೇ ನೋಡುತ್ತ ಆಶ್ಚರ್ಯದಿಂದ) ಆರ್ಯನೇ, ಇದೇನು?

ದ್ರುತವಿಲಂಬಿತ॥ ಕಡಿದ ಮುತ್ತಿನ ಮಾಲೆಯ ರೀತಿಯಿಂ
ದಿಡಿದ ಕಂಬನಿ ಧಾತ್ರಿಗುರುಳ್ವುದೇಂ?
ತಡೆದೊಡಂ ಬೆತೆಯುಂ ಚಲಿಪೋಷ್ಠಮುಂ
ಮಿಡಿವ ನಾಸಿಕಮುಂ ಸಲೆ ಪೇಳವೆ? ॥ ೨೯ ॥

**ರಾಮ**—ವತ್ಸ!

**ಕಂ॥** ಅಂದಿನ ವಿಯೋಗದುಃಖದ
ದಂದುಗಮಾ ವೈರಿನಾಶಕೆಂತೋ ಸಹ್ಯಂ ।
ಎಂದಿರೆ ಮರ್ಮವ್ರಣದವೊ-
ಲಿಂದದೆ ಬಗೆವಂದಸಹ್ಯವೇದನೆಗೊಳಿಕುಂ ॥ ೩೦ ॥

ಸೀತೆ—ಆಹಾ ಕಷ್ಟವೆ! ಈ ಅಹಿತವಾರ್ತಾಶ್ರವಣದ ಮೂಲಕ ಚಡಪಡಿಸುತ್ತಿರುವ ನನ್ನ ಮನಸ್ಸಿಗೆ ಆರ್ಯಪುತ್ರನ ವಿಯೋಗವುಂಟಾದಂತೆಯೇ ಭಾಸವಾಗುತ್ತಿದೆ.

**ಲಕ್ಷ್ಮಣ**—(ಸ್ವಗತ) ಆಗಲಿ! ಪರಿಹರಿಸುವೆನು. (ಎಂದು ಚಿತ್ರವನ್ನು ನೋಡಿ ಪ್ರಕಾಶಂ) ದೇವಿ, ಮನ್ವಂತರದಲ್ಲಿ ಮೊದಲನೆಯವನಾಗಿ ಪೂಜ್ಯನೂ ತಂದೆಗೆ ಸಮಾನನೂ ಆಗಿರುವ ಗೃಧ್ರಾಧಿಪತಿಜಟಾಯುವಿನ ಚರಿತ್ರೆಯು ಆತನ ವಿಕ್ರಮಾತಿಶಯದೊಂದಿಗೆ ಇಲ್ಲಿ ಚಿತ್ರಿತವಾಗಿರುವುದನ್ನು ಗಮನಿಸಬೇಕು.

**ಸೀತೆ**—ಹಾಹಾ! ತಂದೆಯಾದ ಜಟಾಯುವೇ, ನೀನು ಮಿತಿಮೀರಿದ ಪುತ್ರವಾತ್ಸಲ್ಯವನ್ನು ಪ್ರಕಟಿಸಿಕೊಂಡೆಯಲ್ಲಾ!

**ರಾಮ**— ಹಾ ತಾತ! ಕಶ್ಯಪಮುನಿಸಂಜಾತ! ಶಕುಂತರಾಜ! ಲೋಕದಲ್ಲಿ ನಿನ್ನ ಹಾಗೆ ಮಹಾತ್ಮನೂ ಪೂಜ್ಯನೂ ಸಾಧುವೂ ಆಗಿರುವ ಬಂಧುವು ಇನ್ನೆಲ್ಲಿ ದೊರೆಯಬೇಕು?

**ಲಕ್ಷ್ಮಣ**—ದೇವಿ, ಜನಸ್ಥಾನದ ಪಶ್ಚಿಮದಲ್ಲಿ ತೋರುವುದಿದು ದನುಕಬಂಧಾಧಿಷ್ಠಿತವಾದ ಕ್ರೌಂಚಾರಣ್ಯವೆಂಬ ದಂಡಕೆಯ ಭಾಗವು. ಇದರ ಸಮೀಪದಲ್ಲೇ ಮತಂಗಾಶ್ರಮವಿರುವುದು. ಇಲ್ಲಿಯೇ ತಪಸ್ಸಿದ್ಧ

ಯನ್ನು ಪಡೆದ ಶ್ರಮಣಿಯೆಂಬ ಶಬರಿಯ ಸನ್ನಿವೇಶವು. ಇದೇ ಪಂಪಾ ತೀರ್ಥವೆಂಬ ಪದ್ಮಸರೋವರವು.

ಸೀತೆ—ವತ್ಸ, ಆರ್ಯಪುತ್ರನು ಕೋಪಧೈರ್ಯಗಳನ್ನು ತೊರೆದು ಮುಕ್ತಕಂಠನಾಗಿ ಇಲ್ಲಿಯೇ ಗೋಳಾಡಿದನಲ್ಲವೆ?

**ರಾಮ**—ಪ್ರಿಯೆ, ಸರೋವರವಿದು ಬಹುರಮಣೀಯವು—

— ಮತ್ತೇಭವಿಕ್ರೀಡಿತ —

ಕಲಹಂಸಂಗಳ ಪಕ್ಷಪಾತಮೆನಸುಂ ಕಲ್ಲೋಲಮುಂ ಪೊಣ್ಮಿಸ
ಲ್ಚಲಿಸುತ್ತಿರ್ದ ಕುಮುದ್ವತೀನಲಿನಕಲ್ಹಾರಾದಿಷಂಡಂಗಳಿಂ ।
ವಿಲಸದ್ದೃಶ್ಯಮನೀ ಸರೋವರದೊಳಾಂ ನೊಂದಿರ್ದೊಡಂ ಕಂಡೆನಂ
ದೆಲೆಗೇ ಕಂಬನಿ ಜಾರಿ ಬಿಳ್ದಿರೆ ಮುಗುಳ್ದಂ ತುಂಬುತಿರ್ಪನ್ನೆಗಂ ॥ ೩೧ ॥

**ಲಕ್ಷ್ಮಣ**—ಇವನೇ ಪೂಜ್ಯನಾದ ಹನುಮಂತನು.

ಸೀತೆ—ಮೊದಲಿಂದಲೂ ಕಂಗೆಟ್ಟ ಜೀವಲೋಕವನ್ನು ಉದ್ಧರಿಸುತ್ತ ಬಹಳ ಉಪಕಾರಮಾಡುತ್ತಿರುವ ಮಹಾನುಭಾವನಾದ ಮಾರುತಿಯು ಇವನೇ ಸರಿ.

**ರಾಮ—ಕಂ॥** ಆವನೊ ಘನವಿಕ್ರಮಿ ಮ—
ತ್ತಾವನೊ! ಅಂಜನೆಗೆ ಜನನಿಗೊಲವಿತ್ತವನಾ ।
ಪವನಾತ್ಮಜನಿಂದಾಮುಂ
ಭುವನಂಗಳುಮಂತೆ ಕೃತಿಗಳೆನಿಪೆವು ಸತತಂ
॥ ೩೨ ॥

ಸೀತೆ—ವತ್ಸ, ಇದೋ ಇಲ್ಲಿ ಹೂಬಿಟ್ಟಿರುವ ಕದಂಬ ವೃಕ್ಷಗಳು ವಿಶೇಷವಾಗಿ ಶೋಭಿಸುತ್ತಿವೆ. ನವಿಲುಗಳು ಸಂತೋಷದಿಂದ ಕುಣಿದಾಡುತ್ತಿವೆ. ಕಟಾಕ್ಷವೀಕ್ಷಣವೇ ಮೊದಲಾದ ಶರೀರವ್ಯಾಪಾರಗಳಿಂದ ಮನೋಜ್ಞನಾಗಿರುವ ಆರ್ಯಪುತ್ರನು ಮೂರ್ಛೆಯನ್ನೈದುತ್ತಿರಲು ವಿಷಣ್ಣನಾದ ನಿನ್ನಿಂದ ಅವಲಂಬಿಸಲ್ಪಟ್ಟಂತೆ ಈ ಮರದ ಕೆಳಗೆ ಚಿತ್ರಿತನಾಗಿರುವನಲ್ಲ! ಇಲ್ಲಿ ತೋರುವ ಪರ್ವತದ ಹೆಸರೇನು?

**ಲಕ್ಷ್ಮಣ—**

ಮಾಲಿನಿ॥ ಗಿರಿಯಿದು ಪಸರಿಂದಂ ಮಾಲ್ಯವಂತಂ ಮನೋಜ್ಞಂ
ಬಿರಿದ ಕಕುಭದಿಂದುತ್ತುಂಗಶೃಂಗಾಭ್ರದಿಂದಂ ।
ವಿರಹಭರದೊಳಾರ್ಯಂ . . . . . . .

**ರಾಮ—** ವತ್ಸನಾಂ ಕೇಳಲಾರೆಂ
ಮರುಕಳಿಪುದು ಮತ್ತಂ ಜಾನಕೀವಿಪ್ರಯೋಗಂ
॥ ೩೩ ॥

**ಲಕ್ಷ್ಮಣ—** ಇನ್ನು ಮುಂದೆ ಚಿತ್ರದಲ್ಲಿ ಆರ್ಯನು ಹಾಗೂ ವಾನರ ಶ್ರೇಷ್ಠರು ದುಷ್ಟರಾಕ್ಷಸರೊಂದಿಗೆ ನಡೆಯಿಸಿದ ಉತ್ತರೋತ್ತರಜಯ ಪ್ರದಗಳೆನಿಸಿದ ಭೀಕರಯುದ್ಧದೃಶ್ಯಗಳು. ದೇವಿಯು ಬಹಳಹೊತ್ತಿನಿಂದಲೂ ನಿಂತು ಬಳಲಿರಬಹುದಾದುದರಿಂದ ವಿಶ್ರಮಿಸಿಕೊಳ್ಳಲಿ ಎಂದು ವಿಜ್ಞಾಪಿಸಿಕೊಳ್ಳುವೆನು.

**ಸೀತೆ**--ಆರ್ಯಪುತ್ರನೆ, ಚಿತ್ರಸಂದರ್ಶನದಿಂದ ಬಯಕೆಯೊಂದು ಒಡಮೂಡುತ್ತಲಿದೆ. ಆಗಬಹುದಾದರೆ ವಿಜ್ಞಾಪಿಸಿಕೊಳ್ಳುವೆನು.

**ರಾಮ—** ಆ ಮನೋರಥವನ್ನು ಸಂಕೋಚವಿಲ್ಲದೆ ತಿಳಿಸಬೇಕು.

**ಸೀತೆ—** ಪ್ರಸನ್ನಗಂಭೀರಗಳಾದ ಅರಣ್ಯಗಳಲ್ಲಿ ವಿಹಾರಕ್ಕಾಗಿ ಸಂಚರಿಸಿ ಪರಿಶುದ್ಧವಾಗಿಯೂ ತಂಪಾಗಿಯೂ ಪ್ರವಹಿಸುತ್ತಿರುವ ಭಾಗೀರಥೀತೀರ್ಥದಲ್ಲಿ ಸ್ನಾನಮಾಡಬೇಕೆಂಬ ಇಚ್ಛೆಯು ತಲೆದೋರುತ್ತಿರುವುದು.

**ರಾಮ—** ವತ್ಸ ಲಕ್ಷ್ಮಣಾ!

**ಲಕ್ಷ್ಮಣ—** ಸಿದ್ಧನಾಗಿರುವೆನು.

**ರಾಮ—** ವತ್ಸ, ಬಯಕೆಯನ್ನು ವಿಳಂಬವಿಲ್ಲದೆ ನೆರವೇರಿಸಬೇಕೆಂದು ಈಗ ತಾನೇ ಗುರುಗಳ ಸಂದೇಶವಾಗಿರುವುದಷ್ಟೆ! ಆದುದರಿಂದ ಮುಗ್ಗರಿಸಿ ಬೀಳದಂತೆ ಯೋಗ್ಯವಾಗಿರುವ ರಥವನ್ನು ತರಿಸುವವನಾಗು.

**ಸೀತೆ—** ಆರ್ಯಪುತ್ರನೂ ನನ್ನೊಂದಿಗೆ ಬರಬೇಕು.

**ರಾಮು**—ಕಠಿನಚಿತ್ತಳೆ, ಇದನ್ನೂ ಹೇಳಬೇಕೆ?

**ಸೀತೆ**—ಹಾಗಿದ್ದರೆ ನನಗೆ ಬಹುಸಂತೋಷವು.

**ಲಕ್ಷ್ಮಣ**—ಆರ್ಯನು ಆಜ್ಞಾಪಿಸಿದಂತೆಯೇ ನಡಕೊಳ್ಳುವೆನು. (ಎಂದು ಹೊರಟು ಹೋಗುವನು.)

**ರಾಮು**—ಪ್ರೇಯಸಿ, ಆ ಗವಾಕ್ಷದ ಬಳಿ ಕುಳಿತುಕೊಳ್ಳಬಹುದಲ್ಲಾ!

**ಸೀತೆ**—ಹಾಗೆಯೇ ಆಗಲಿ! ಬಳಲಿಕೆಯಿಂದ ತಲೆದೋರುವ ನಿದ್ದೆಗೆ ಪರವಶಳಾಗುತ್ತಿರುವೆನಲ್ಲ!

**ರಾಮು**—ಹಾಗಾದರೆ ನೀನು ಅಲ್ಲಿಯತನಕ ಬೀಳದ ಹಾಗೆ ನನ್ನನ್ನು ಬಲವಾಗಿ ಹಿಡಿದುಕೊಳ್ಳಬೇಕು.

**ಕಂ॥** ಚಂದ್ರಕರಸ್ಪರ್ಶದೊಳಾ
ಚಂದ್ರಮಣಿಸ್ಯೂತಹಾರವಿಭ್ರಮಮಿರೆ ನೀಂ ।
ಚಂದ್ರಮುಖೀ ಶ್ರಮಸಾಧ್ವಸ
ದಿಂ ದ್ರವಿಪೀತೋಳನೆನ್ನ ಗ್ರೀವೆಗೆ ಬಿಗಿಯೌ ॥ ೩೪ ॥

(ಹಾಗೆಯೇ ಮಾಡಿಸಿಕೊಂಡು ಸಂತೋಷದೊಡನೆ) ಆಹಾ! ಇದೇನು?

— ಮತ್ತೇಭವಿಕ್ರೀಡಿತ —

ರಮಣೀ ನಿನ್ನಯ ಸೋಂಕು ಸೋಂಕು ಕರಣವ್ಯಾಪಾರಮಂ ತಾನೆ ಸಂ-
ಭ್ರಮವೊಂದಿಪ್ಪುದು ಮತ್ತಶೇಷಮದನೇಕುಂದಿಪ್ಪುದೌ ವೇಗದಿಂ ।
ಕ್ರಮದಿಂ ಸೌಖ್ಯಮೊಕಷ್ಟಮೋವಿಷದಸೋಂಕೋನಿದ್ರೆಯೋವ್ಯಾಪ್ತಮೋ
ಹಮೊ ತಾಂ ಸಂಮದಮೆಂದು ಪೇಳಲದನಾಂ ಮೂಢಾತ್ಮನಾಗಿರ್ದಪೆಂ
॥ ೩೫ ॥

**ಸೀತೆ**—ಇದು ಆರ್ಯಪುತ್ರನು ನನ್ನಲ್ಲಿ ವಿಶೇಷವಾಗಿ ಪ್ರಸನ್ನನಾಗಿರುವುದರ ಪರಿಣಾಮವು.

**ರಾಮು**— — ಚಂಪಕಮಾಲೆ —

ಸರಸಿಜನೇತ್ರೆ ನಿನ್ನ ವಚನಂಗಳೆ ಚಿತ್ತರಸಾಯನಂಗಳುಂ
ವಿರಸದೆ ಬಾಡಿದೆನ್ನಸುಸುಮಕ್ಕೊಲಿದಿರ್ಪ ವಿಕಾಸಕಂಗಳುಂ ।

ನಿರುಕಿಸಲಿಂದ್ರಿಯಂಗಳ ಸಮೂಹಕೆ ತರ್ಪಕಮೋಹನಂಗಳುಂ
ನೆರೆವುವೆನಲ್ಕಿವೇ ಶ್ರುತಿಗೆ ಗಾನಸುಧಾರಸಪೂರಕಂಗಳುಂ ॥ ೩೬ ॥

ಸೀತೆ–ಹಿತವನ್ನೇ ಆಡುತ್ತಿರುವವನಾಗಿ ಪ್ರಿಯಂವದನೆಂಬ ಯೌಗಿಕ ನಾಮದಿಂದ ಒಪ್ಪುತ್ತಿರುವ ಪ್ರಿಯನೇ ಇಲ್ಲಿ ವಿಶ್ರಮಿಸಿಕೊಳ್ಳೋಣ. (ಎಂದು ಹೇಳುತ್ತ ಸುತ್ತಲೂ ನೋಡುವಳು)

**ರಾಮ**—ಪ್ರಿಯೆ, ಇಲ್ಲಿ ಹುಡುಕತಕ್ಕದ್ದೇನು?

**ಕಂ॥** ಮದುವೆಯ ಬಳಿಕಂ ಬಾಲ್ಯದೆ
ಸದನದೊಳಂ ವನದೊಳಂದು ಜವ್ವನದಲ್ಲಂ ।
ಪದುಳದ ನಿದ್ದೆಗೆಯೊದವಿ
ರ್ದುದೆ ರಾಮನ ಬಾಹು ನಿನಗೆ ತಲೆಗಿಂಬೆಲೆಗೇ ॥ ೩೭ ॥

ಸೀತೆ—(ನಿದ್ದೆಯ ಬಾಧೆಯನ್ನು ನಟಿಸುತ್ತ) ಆರ್ಯಪುತ್ರನು ಹೇಳಿದಂತೆಯೇ (ಎನ್ನುತ್ತ ನಿದ್ರಿಸುವಳು)

**ರಾಮ**—ಏನು! ನಲ್ಲೆಯು ಪ್ರಿಯವಾದಿನಿಯಾಗಿಯೇ ನನ್ನ ವಕ್ಷಃಸ್ಥಳವನ್ನು ಅವಲಂಬಿಸಿಕೊಂಡು ನಿದ್ರಿಸಿದಳಲ್ಲ! (ಯೋಚಿಸಿ)

— ಮತ್ತೇಭವಿಕ್ರೀಡಿತ —

ಇವಳೇ ಗೇಹಕೆ ಲಕ್ಷ್ಮಿ ಮತ್ತಿವಳೆ ನೇತ್ರಕ್ಕಂ ಸುಧಾವರ್ತಿ ಮ–
ತ್ತಿವಳ ಸ್ಪರ್ಶಮಿದೆನ್ನೊಡಲ್ಗೆ ಪಿರಿದುಂ ಶ್ರೀಗಂಧಲೇಪಂ ವಲಂ ।
ಇವಳೊಂದೀ ನಳಿದೋಳ್ಗಳಕ್ಕಮಲಮುಕ್ತಾಹಾರಮೆಂದೊಪ್ಪುಲಿ–
ನ್ನಿವಳೊಳ್ಪಿಂ ಮೆರೆವೆಂ ಪರಂತು ವಿರಹಂ ದಂದಹ್ಯಮಾನಂ ಕರಂ
॥ ೩೮ ॥

**ಪ್ರತೀಹಾರಿ**—(ಪ್ರವೇಶಿಸಿ) ಒಡೆಯ, ಬಂದಿರುವನು.

**ರಾಮ**—ಅದಾವನು?

**ಪ್ರತೀಹಾರಿ**—ಸನ್ನಿಧಿಯಲ್ಲಿ ಸೇವಕನಾಗಿರುವ ದುರ್ಮುಖನು ಬಂದಿರುವನು.

**ರಾಮ**—(ಸ್ವಗತಂ) ಅಂತಃಪುರಸಂಚಾರಿಯಾದ ದುರ್ಮುಖನೆ? ಪಟ್ಟಣಗಳಲ್ಲೂ ಹಳ್ಳಿಪಳ್ಳಿಗಳಲ್ಲೂ ಜನರು ನಮ್ಮ ವಿಷಯವಾಗಿ ಏನೆನ್ನು

ವರಿಂದು ಕೇಳಿಕೊಂಡು ಬರುವಂತೆ ಅವನನ್ನು ಗೂಢಚಾರನನ್ನಾಗಿ ಕಳು ಹಿಸಿದ್ದೆವಷ್ಟೆ! (ಪ್ರಕಾಶಂ) ಅವನನ್ನಿಲ್ಲಿಗೆ ಬರಹೇಳು.

**ಪ್ರತೀಹಾರಿ**—ಹಾಗೆಯೇ ಆಗಲಿ (ಎಂದು ಹೊರಟು ಹೋಗುವಳು).

**ದುರ್ಮುಖ**—(ಪ್ರವೇಶಿಸಿ ಸ್ವಗತಂ) ಆಹಾ ಕಷ್ಟವೇ! ಸೀತಾ ದೇವಿಯ ವಿಷಯವಾಗಿ ಯೋಚಿಸುವುದಕ್ಕೂ ಸಾಧ್ಯವಾಗದಂತಹ ಜನಾಪ ವಾದವನ್ನು ಸ್ವಾಮಿಯೊಡನೆ ಹೇಗೆ ತಾನೇ ವಿಜ್ಞಾಪಿಸಿಕೊಳ್ಳಲಿ? ಅಥವಾ ಚಿಂತಿಸಿ ಫಲವೇನು? ಅದೃಷ್ಟಹೀನನಾದ ನನಗೆ ಸ್ವಾಮಿಯ ಅಪ್ಪಣೆ ಯಾಗಿರುವುದಷ್ಟೆ!

**ಸೀತೆ**—(ಕನವರಿಸುತ್ತ) ಹಾ ಸೌಮ್ಯ ಆರ್ಯಪುತ್ರ, ನೀನೆಲ್ಲಿರುವೆ?

**ರಾಮ**—ಚಿತ್ರದರ್ಶನದಿಂದುಂಟಾದ ವಿರಹಭಾವನೆಯು ದೇವಿಗೆ ಕಷ್ಟಕರವಾದ ಸ್ವಪ್ನವನ್ನು ಉಂಟುಮಾಡುತ್ತಿರುವುದು. (ಎಂದು ಹೇಳುತ್ತ ಪ್ರೀತಿಯಿಂದ ಅವಳ ಅಂಗಾಂಗಗಳನ್ನು ಮೆಲ್ಲಮೆಲ್ಲನೆ ಹಿಡಿದೊತ್ತುತ್ತ)

— ಶಾರ್ದೂಲವಿಕ್ರೀಡಿತ —

ಎತ್ತಂ ತಾಂ ಸುಖದುಃಖಭೇದವಿರದೊಂದೇ ರೀತಿಯಲ್ಲಿರ್ಪುದಿ-
ನ್ನೆತ್ತಂ ತಾಂ ಜರೆಯಿಂದಹಾರ್ಯರಸಮೆಂಬಂತೊರ್ಮೆಯಿಂದಿರ್ಪುದೋ
ಮತ್ತಂಕಾಲದೆ ಭಾವಗುಪ್ತಿಯುಳಿದಾ ನೇಹಂ ಸ್ಥಿರಂಗೊಳ್ವಿನಂ
ಸುತ್ತುಂ ಕ್ಷೇಮದೆ ಕೂಡಿ ಪೆರ್ಮೆವಡೆವಾ ದಾಂಪತ್ಯಮೇ ಪ್ರಾರ್ಥ್ಯಮೈ ॥ ೩೯ ॥

**ದುರ್ಮುಖ**—(ಸಮೀಪಕ್ಕೆ ಬಂದು) ಮಹಾರಾಜನಿಗೆ ಜಯ ವಾಗಲಿ! ಜಯವಾಗಲಿ!

**ರಾಮ**—ತಿಳಿದುಬಂದುದನ್ನು ಹೇಳು!

**ದುರ್ಮುಖ**—"ಶ್ರೀರಾಮಚಂದ್ರನಿಂದ ನಾವೆಲ್ಲರೂ ದಶರಥ ಮಹಾರಾಜನನ್ನು ಮರೆತವರಾದೆವು" ಎಂಬುದಾಗಿ ಪಟ್ಟಣಿಗರೂ ಹಳ್ಳಿ ಪಳ್ಳಿಯ ಜನರೂ ಸ್ವಾಮಿಯನ್ನು ಸರ್ವದಾ ಶ್ಲಾಘಿಸುತ್ತಿರುವರು.

**ರಾಮ**—ಆ ಸ್ತೋತ್ರವಂತಿರಲಿ! ಏನಾದರೂ ದೋಷವಿದ್ದರೆ ಹೇಳು! ಅದಕ್ಕೆ ತಕ್ಕ ಹಾಗೆ ನಡೆದುಕೊಂಡರಾಯಿತು.

**ದುರ್ಮುಖ**—(ಕಂಬನಿದುಂಬಿ) ಸ್ವಾಮಿಯು ಕೇಳಬೇಕು! (ಕಿವಿಯಲ್ಲಿ ಹೀಗಂತೆ ಎನ್ನುವನು)

**ರಾಮ**—ಆಹಾ! ಇದು ಅಸಹ್ಯವೇದನೆಯ ವಾಗ್ವಜ್ರವು (ಎನ್ನುತ್ತ ಮೂರ್ಛೆಹೊಂದುವನು)

**ದುರ್ಮುಖ**—ಸ್ವಾಮಿಯು ಸಮಾಧಾನ ಹೊಂದಬೇಕು! ಸಮಾಧಾನ ಹೊಂದಬೇಕು (ಎನ್ನುತ್ತ ಉಪಚರಿಸುವನು).

**ರಾಮ**—(ಮೆಲ್ಲಮೆಲ್ಲನೆ ಚೇತರಿಸಿಕೊಂಡು)

**ಕಂ||** ಪರಗೃಹವಾಸದ ನಿಂದೆಯು
ಪರಿಹರಿಸಿದೆವೆಂದು ಸೀತೆಗತ್ಯದ್ಭುತದಿಂ ।
ಮರಲ್ವುಮದೇ ದುರ್ವಿಧಿಯಿಂ
ಪರಿವುದೆ! ಉನ್ಮತ್ತಶುನಕವಿಷದವೊಲಕಟಾ ॥ ೪೦ ॥

ಅದಕ್ಕಾಗಿ ಈ ಮಂದಭಾಗ್ಯನೀಗ ಮಾಡುವುದೇನು? (ಎಂದು ಯೋಚಿಸುತ್ತ ವ್ಯಸನದಿಂದ) ಇನ್ನು ಬೇರೆ ವಿಚಾರವೇಕೆ?

**ಕಂ||** ಎನಿತಾದೊಡಮೇನೆಸಕಂ
ಜನಸೇವೆಯೆ ಮುಖ್ಯವೆಂದು ಸಜ್ಜನರ ಮತಂ ।
ಜನಪತಿಯುಮ್ಮಂ ಜನರಂ—
ಜನೆಗಾಗಿಯೆ ಜೀವದೊಡನೆ ತೊರೆಯನೆ ಮುನ್ನಂ ॥ ೪೧ ॥

ಈಗ ತಾನೇ ವಸಿಷ್ಠಮಹರ್ಷಿಗಳ ಸಂದೇಶವೂ ಬಂದಿರುವುದು. ಅಷ್ಟು ಮಾತ್ರವಲ್ಲದೆ—

**ಕಂ||** ಪರಿಶುದ್ಧಚರಿತರಿಂ ಭಾ—
ಸ್ಕರವಂಶಂ ತೊಳಗಿ ಬೆಳಗಿರಲ್ಅಪವಾದಂ ।
ಪರೆದಿರೆ ಕರೆಗೊಳ್ಳದೆ! ಹಾ!
ಮರುಕಮಿದೆನ್ನತ್ತಣಿಂದೆ ಕುಲಮುಪವಿತ್ರಂ ॥ ೪೨ ॥

ಹಾ ದೇವಿ! ಯಜ್ಞಭೂಮಿಯಲ್ಲಿ ಜನಿಸಿದವಳೆ; ಹಾ ಮಗಳೆನಿಸಿ ವಸುಂಧರೆಯನ್ನು ಪರಿಶುದ್ಧಿಗೊಳಿಸಿದವಳೆ; ಹಾ ನಿಮಿಕುಲಪ್ರಸಿದ್ಧ

ನಾದ ಜನಕರಾಜನ ಮಗಳೆನಿಸಿ ವಂಶವನ್ನು ಬೆಳಗಿಸತಕ್ಕವಳೆ; ಹಾ ಅಗ್ನಿ ನಾರಾಯಣ, ವಸಿಷ್ಠ, ಅರುಂಧತಿ ಮೊದಲಾದವರಿಂದ ಪರಿಶುದ್ಧಚರಿತ್ರ ಳೆಂದು ಕೊಂಡಾಡಲ್ಪಟ್ಟವಳೆ; ಹಾ ರಾಮನ ಜೀವಿತಸರ್ವಸ್ವವೇ; ಹಾ ವನವಾಸಪ್ರಿಯಸಖಿಯೇ; ಹಾ ತಂದೆಯಾದ ದಶರಥಮಹಾರಾಜನ ವಾತ್ಸಲ್ಯದ ಸೊಸೆಯೇ; ಹಾ ಮಿತಭಾಷಿಣಿ; ನಿನಗೂ ಇಂತಹ ಪರಿ ಣಾಮವೆ?

ಉಪೇಂದ್ರವಜ್ರ॥ ಜಗತ್ಪವಿತ್ರಂ ಸಲೆ ದೇವಿ ನಿನ್ನಿಂ
ಜಗಜ್ಜನಂ ನಿನ್ನೊಳೆ ದೋಷಮೆಂಗುಂ ।
ಜಗತ್ಸನಾಥಂ ಗಡ ದೇವಿಯಿಂದಂ
ತಗುಳ್ದ ಬನ್ನಂ ಬಿಡದೇಕೆ ನಿನ್ನಂ ॥ ೪೩ ॥

(ದುರ್ಮುಖನನ್ನು ಕುರಿತು) ದುರ್ಮುಖನೇ, ಲಕ್ಷ್ಮಣನೊಡನೆ ಹೇಳು! ಹೊಸಬಗೆಯ ಅರಸನಾದ ರಾಮನು ಆಜ್ಞಾಪಿಸಿರುವನು ಎಂದು. (ಆ ಆಜ್ಞೆಯನ್ನು ಕಿವಿಯಲ್ಲಿ ಹೇಳುವನು).

**ದುರ್ಮುಖ**— (ಕೈಗಳನ್ನು ಜೋಡಿಸಿಕೊಂಡು) ಅಹಾ ಕಷ್ಟವೇ! ಅಗ್ನಿಮುಖದಿಂದ ಪರಿಶುದ್ಧಳೆನಿಸಿಕೊಂಡು ರಘುಕುಲವನ್ನು ಉದ್ಧರಿಸ ತಕ್ಕ ಸಂತತಿಯನ್ನು ಗರ್ಭದಲ್ಲಿ ಧರಿಸಿರುವ ದೇವಿಯನ್ನು ದುರ್ಜನರಾಡಿದ ಮಾತಿಗೋಸುಗ ಪರಿತ್ಯಾಗಮಾಡಲು ನಿರ್ಧರಿಸುವುದೇ?

**ರಾಮ**—ಪಾಪವು ಪರಿಹಾರವಾಗಲಿ! ನಮ್ಮ ಪ್ರಜೆಗಳು ದುರ್ಜ ನರೇ?

**ಕಂ॥** ಜನರಿಲ್ಲರ್ಗಮಿನಾನ್ವಯ
ಮನುಮತಮೆನಲಿಲ್ಲಿ ದೈವದಿಂದಪವಾದಂ ।
ಜನಿಸಿತು! ವಿಶುದ್ಧಿಕಾರ್ಯಮ
ನನುಮತಿಪೊಡೆ ದೂರದಲ್ಲಿ ನಡೆದುದದಲ್ತೇ ॥ ೪೪ ॥

ಆದುದರಿಂದ ಬೇಗನೆ ಹೋಗು!

**ದುರ್ಮುಖ**— ಹಾ ದೇವಿ! (ಎಂದು ಅಳುತ್ತ ಹೊರಟು ಹೋಗುವನು).

**ರಾಮ**—ಹಾ ಹಾ! ಕಷ್ಟವೇ! ಅತಿಹೇಯವಾದ ಕಾರ್ಯದಲ್ಲಿ ತೊಡಗಿರುವುದರಿಂದ ನಾನು ಘಾತುಕನಾಗಿ ಪರಿಣಮಿಸುತ್ತಿರುವೆನು—

ವಂಶಸ್ಥ॥ ಎನಿತ್ತಭೀಷ್ಟಂಗಳೊ ಬಾಲ್ಯದಿಂದಲಾ
ನನಿತ್ತರಿಂ ಪೋಷಿಸಿಯುಂ ದ್ವಿತೀಯೆಯುಂ।
ಇನಿತ್ತು ಮೋಸಂಗೊಳಿಸುತ್ತೆ ಮೃತ್ಯುಗೀ
ವೆನೇ? ನೃಶಂಸಂ ಗೃಹಪಕ್ಷಿಯಂದದಿಂ ॥ ೪೫ ॥

ಆದುದರಿಂದ ಅಸ್ಪೃಶ್ಯನೆನಿಸಿದ ಪಾಪಿಯು ಸ್ಪರ್ಶಿಸುತ್ತ ದೇವಿಯನ್ನೇಕೆ ಕೆಡಿಸಬೇಕು? (ಎಂದು ಸೀತೆಯ ತಲೆಯನ್ನು ಮೇಲಕ್ಕೆ ಹಿಡಿದೆತ್ತಿ ತನ್ನ ಕೈಯನ್ನು ಸೆಳೆಕೊಳ್ಳುವನು).

**ಕಂ॥** ಎಲೆ ಮುಗ್ಧೇ ಬಿಡು ಕರ್ಮದ
ಬಲದಿಂ ಚಂಡಾಲನೆನಿಸಿದೆನ್ನಂ ಬೇಗಂ।
ಕೊಲೆಯೆಸಗುವ ವಿಷತರುವಂ
ನಲವಿಂ ಪೊಂದಿರ್ಪೆ ಚಂದನಭ್ರಮೆಯಿಂದಂ ॥ ೪೬ ॥

(ಎಂದು ಎದ್ದುನಿಂತುಕೊಂಡು) ಅಕಟಕಟಾ! ಈಗ ಪ್ರಪಂಚವೇ ವ್ಯತ್ಯಾಸವಾಗಿರುವುದು. ಈಗ ತಾನೇ ಜೀವನದ ಪ್ರಯೋಜನವು ಕೊನೆಗೊಂಡುದು. ಈ ರಾಮನಿಗೀಗ ಜಗತ್ತೆಲ್ಲವೂ ಶೂನ್ಯವಾದ ಜೀರ್ಣಾರಣ್ಯವಾಗಿ ಪರಿಣಮಿಸಿದುದು. ಸಂಸಾರವು ನಿಸ್ಸಾರವಾದುದು. ದೇಹವು ಕಟ್ಟಿಗೆಯಂತೆ ನಶ್ವರವಾದುದು. ನಾನಂತೂ ಅನಾಥನು. ಮಾಡುವುದೇನು? ನನಗೆ ಮುಂದೆ ಗತಿಯೇನು? (ಸ್ವಲ್ಪ ಯೋಚಿಸಿ) ಅಥವಾ ನಾನೇಕೆ ಹೀಗೆ ಚಿಂತಿಸಬೇಕು?

**ಕಂ॥** ಬನ್ನಮನನುಭವಿಸುತಿರೆಂ
ದೆನ್ನೊಳ್ ಚೈತನ್ಯಮಿರಿಸುತುಂ ಬಿದಿ ನಿಸದಂ।
ಮುನ್ನಮೆ ಹೃದಯದೆ ಪೊರಮಡ
ದನ್ನಂ ಪ್ರಾಣಂಗಳೆಂಬ ಕೀಲುಗಳಿಟ್ಟಂ ॥ ೪೭ ॥

ಹಾ ಜನನಿ ಅರುಂಧತಿ! ಹಾ ಪೂಜ್ಯರೇ ವಸಿಷ್ಠವಿಶ್ವಾಮಿತ್ರರೇ; ಹಾ ಭಗವನ್ನಗ್ನಿನಾರಾಯಣ; ಹಾ ಭೂದೇವಿ; ಹಾ ತಂದೆ ಜನಕರಾಜ; ಹಾ ಜನನಿಯರೇ; ಹಾ ಪ್ರಿಯಸಖಮಹಾರಾಜಸುಗ್ರೀವ; ಹಾ ಸೌಮ್ಯ

ಹನುಮಂತ; ಹಾ ಪರಮೋಪಕಾರಿಲಂಕೇಶ್ವರವಿಭೀಷಣ; ಹಾ ಪ್ರಿಯ ಸಖಿತ್ರಿಜಟೇ; ನೀವೆಲ್ಲರೂ ಪಾತಕಿಯಾದ ಈ ರಾಮನಿಂದ ವಂಚಿತರಾದಿರಿ; ಇದು ನಿಮಗೆಲ್ಲರಿಗೂ ಅಸಹನೀಯವಾದ ಅವಮಾನವೇ ಸರಿ; ಅಥವಾ ಅವರೆಲ್ಲರ ಹೆಸರೆತ್ತುವುದಕ್ಕೆ ನಾನಾರು ?

**ಕಂ॥** ಪಿರಿಯರ್ ಕೃತಕೃತ್ಯರವರ್
ದುರುಳಂ ಮೂಢಾತ್ಮನಾಂ ಕೃತಘ್ನಂ ವಲವಾ ।
ಗುರುಗಳ ಪೆಸರಂ ಪಿಡಿದು—
ಚ್ಚರಿಸಲ್ಕಾನವರ್ಗವುಡಸದಿರ್ಕುವೆ ಪಾಪಂ ॥ ೪೮ ॥

ಪರಮಪಾತಕಿಯಾದ ನಾನು—

**ಕಂ॥** ಉರದೊಳ್ಮಲಗುತೆ ನಲ್ಮೆಯಿ
ನೊರಗಿದಳಂ ಗರ್ಭಭಾರಪೀಡಿತಳಂ ನಿ— ।
ರ್ಭರದಿನೊರಂಟಂ ಕ್ರವ್ಯಾ—
ದರ ನೆರವಿಗೆ ಬಲಿಗೊಡಲ್ಕೆ ಸೆಳೆವಂತೆಳೆದೆಂ ॥ ೪೯ ॥

(ಎಂದು ಹೇಳುತ್ತ ಸೀತೆಯ ಚರಣಗಳನ್ನು ಶಿರಸ್ಸಿನಲ್ಲಿ ಇರಿಸಿಕೊಂಡು) ದೇವಿ, ರಾಮಶಿರಸ್ಸಿಗೆ ನಿನ್ನ ಪಾದಪಂಕಜಸ್ಪರ್ಶವು ಇದೇ ಕೊನೆಯದಾಗುವುದೆ? (ಎಂದು ಹೇಳುತ್ತ ಉಮ್ಮಳಿಸುವನು)

(ನೇಪಥ್ಯದಲ್ಲಿ)

ಅಶಾಂತಿಯು! ಅಶಾಂತಿಯು!

**ರಾಮ**— ಅದೇನೆಂದು ತಿಳಿಯಿರಿ! ತಿಳಿಯಿರಿ!

(ಮತ್ತೂ ನೇಪಥ್ಯದಲ್ಲಿ)

**ಕಂ॥** ಜಗುನೆಯ ತೀರದೊಳಿರುತುಂ
ಮಿಗೆ ಕಷ್ಟದೆ ತಪಮನೆಸಪ ರಿಸಿಗಳ ತಂಡಂ ।
ಪುಗೆವಂದ ಲವಣನಿಂದಂ
ಸುಗಿದೆಮ್ಮಂ ಸಲಪೆನುತ್ತೆ ಬಂದುದು ಜನಪಾ ॥ ೫೦ ॥

ಏನು! ಈಗಲೂ ರಾಕ್ಷಸಭಯವೆ? ಮಧುರಾಪುರವಾಸಿಯೂ ಕುಂಭೀ

ನಸೀಪುತ್ರನೂ ಆದ ದುಷ್ಟಲವಣಾಸುರನನ್ನು ಸಂಹರಿಸುವುದಕ್ಕಾಗಿ ಈಗಲೇ ಶತ್ರುಘ್ನನನ್ನು ಕಳುಹಿಸುವೆನು. (ಎಂದು ಸ್ವಲ್ಪ ಮುಂದೆ ಹೋಗಿ ಪುನಃ ಹಿಂತಿರುಗಿ) ಹಾ ದೇವಿ! ನಿನಗೆ ಇಂತಹ ಅವಸ್ಥೆಯೇ? ಭಗವತಿ ವಸುಂಧರೀ, ಜನಕರಾಯನ ಸುತೆಯೂ ನಿನ್ನ ತನುಜೆಯೂ ಆಗಿರುವ ಈ ಸೀತೆಯನ್ನು ಹೇಗಾದರೂ ಪರಿಪಾಲಿಸಿಕೊಳ್ಳಬೇಕು!

**ಕಂ॥** ನಿಮಿರಘುಕುಲದ್ವಯಕ್ಕಂ—
ತಮಿತಾಭ್ಯುದಯಂಗಳಾಗಲೆಂದೀ ಮಗಳಂ ।
ಸುಮುಹೂರ್ತದ ಪುಣ್ಯಫಲಂ
ಸಮನಿಸೆ ನೀಂ ಯಜ್ಞಭೂಮಿಯಿಂದಂ ಪಡೆದೌ ॥ ೫೧ ॥

(ಎಂದು ಮರುಗುತ್ತ ಹೊರಟು ಹೋಗುವನು)

ಸೀತೆ— ಹಾ ಸೌಮ್ಯನಾದ ಆರ್ಯಪುತ್ರನೇ (ಎನ್ನುತ್ತ ಎಚ್ಚರಗೊಂಡು) ಕಷ್ಟವೇ! ಈ ದುಸ್ವಪ್ನದಿಂದ ವಂಚಿತಳಾಗಿರುವೆನು. ಆರ್ಯಪುತ್ರನನ್ನೀಗ ಕರೆಯುವೆನು. (ಎಂದು ನೋಡಿ) ಇದೇನು! ಇಲ್ಲಿ ನಿದ್ರಿಸಿದ ನನ್ನನ್ನು ಏಕಾಕಿನಿಯನ್ನಾಗಿ ಬಿಟ್ಟುಹೋಗಿರುವನು. ಹೀಗಾಗಲು ಕಾರಣವೇನೋ ತಿಳಿಯದು. ಆಗಲಿ, ಸ್ವತಂತ್ರಳಾಗಿ ಅವನನ್ನು ನೋಡಿದಾಗ ಕೋಪಿಸಿಕೊಳ್ಳುವೆನು. ಯಾರಲ್ಲಿ ಸೇವಕರು?

**ದುರ್ಮುಖ**— (ಪ್ರವೇಶಿಸಿ) "ರಥವು ಸಿದ್ಧವಾಗಿರುವುದು; ದೇವಿಯವರು ರಥವನ್ನೇರಿಕೊಳ್ಳಬೇಕು." ಎಂದು ಕುಮಾರ ಲಕ್ಷ್ಮಣಸ್ವಾಮಿಯವರು ವಿಜ್ಞಾಪಿಸಿಕೊಳ್ಳುತ್ತಿರುವರು.

ಸೀತೆ— ಹಾಗೆಯೇ ಆಗಲಿ! ನಾನೀಗಲೇ ರಥವನ್ನೇರಿಕೊಳ್ಳುವೆನು. (ಎಂದು ಎದ್ದು ನಿಂತು ಮುಂದಕ್ಕೆ ಅಡಿಯಿಡುತ್ತ) ಭಾರವಾದ ಗರ್ಭವು ಅದುರುತ್ತಿರುವುದರಿಂದ ಮೆಲ್ಲಮೆಲ್ಲನೆ ನಡೆಯೋಣ.

**ದುರ್ಮುಖ**— ದೇವಿಯವರು ಹೀಗೆ ಬರಬೇಕು. (ಎಂದು ದಾರಿ ತೋರಿಸುವನು)

ಸೀತೆ— ರಘುಕುಲದೇವತೆಗಳಿಗೆ ಪ್ರಣಾಮವು! ತಪೋಧನರಿಗೆ ವಂದನೆಯು! (ಎಂದೆಲ್ಲರೂ ಹೊರಟುಹೋಗುವರು)

ಇಂತಿದು ಚಿತ್ರಸಂದರ್ಶನವೆಂಬ

**ಪ್ರಥಮಾಂಕಂ**

# — ದ್ವಿತೀಯಾಂಕಂ —

(ನೇಪಥ್ಯದಲ್ಲಿ)

ತಪಸ್ವಿನಿಗೆ ಸ್ವಾಗತವು!

(ಬಳಿಕ ಯಾತ್ರೆಗೆ ಅನುಕೂಲವಾದ ವೇಷದಿಂದೊಪ್ಪುವ ತಾಪಸಿಯು ಪ್ರವೇಶಿಸುವಳು.)

**ತಾಪಸಿ**— ಓಹೋ! ಈ ವನದೇವತೆಯು ಸ್ವಾಗತಿಸುವ ಸಲುವಾಗಿ ಪಲ್ಲವಪುಷ್ಪಫಲಗಳಿಂದ ಕೂಡಿದ ಅರ್ಘ್ಯಜಲವನ್ನು ಹಿಡಿದುಕೊಂಡು ಸಂಭ್ರಮದಿಂದ ನನ್ನನ್ನೇ ಇದಿರು ನೋಡುತ್ತಿರುವಳು.

**ವನದೇವತೆ**—(ಪ್ರವೇಶಿಸಿ ಅರ್ಘ್ಯವನ್ನಿತ್ತು ಕೈಮುಗಿದುಕೊಂಡು)

— ಮತ್ತೇಭವಿಕ್ರೀಡಿತ —

ಇದು ತಾಂ ಸಜ್ಜನಸಂಗವೆಂಬುದನಿತುಂ ಪುಣ್ಯಂಗಳಿಂದಾದುದೌ
ಸುದಿನಂ ತಾಪಸಿ ಮಾನಸಕ್ಕೆ ಮಹಮಾಭೋಗ್ಯಂ ವನಂ ಸ್ವೇಚ್ಛೆಯಿಂ ।
ಮುದವೀಯಲ್ಕಿದೊ ತಣ್ಣೆಳಲ್ಜಲವಿದೋ ಕಂದಂ ಫಲಂ ಮೂಲಮೆಂ-
ಬುದು ಸಂಸಿದ್ಧಮರಣ್ಯದೊಳ್ತವಸಿಗಳ್ಗನ್ನಂ ಸದಾ ಕಾಲಮುಂ ॥ ೧ ॥

**ತಾಪಸಿ**— ಪುಣ್ಯವತಿ, ಈ ವಿಷಯದಲ್ಲಿ ನೀನು ಉಪಚಾರವಾಗಿ ಹೇಳತಕ್ಕದ್ದೇನು?

— ಮತ್ತೇಭವಿಕ್ರೀಡಿತ —

ಹಿತಮಾಗಿರ್ಪುದು ವೃತ್ತಿ ವೃತ್ತಿಯ ತೆರಂ ವಾಗ್ವಾಣಿಯೆಂತಂತೆಯೇ
ಮತಿಯಾ ಸನ್ಮತಿಯಂತೆ ಸತ್ಪರಿಚಯಂ ಶುದ್ಧಂ ಶುಭಂ ನವ್ಯಮೆಂ- ।
ದತಿಯಾಗಿರ್ಪ ಗುಣಂಗಳಿಂ ಮೆರೆವಖಂಡಾನಂದರೂಪಕ್ಕನಾ-
ರತಮುಂ ಹೇತುವೆನಿಪ್ಪ ಸಾಧುಜನಸಂಗಂ ಭಾವ್ಯಮೆಂದೆಂದಿಗುಂ
॥ ೨ ॥

(ಹಾಗೆಯೇ ಇಬ್ಬರೂ ಕುಳಿತುಕೊಳ್ಳುವರು)

**ವನದೇವತೆ**— ಪೂಜ್ಯಳಾದ ತಪಸ್ವಿನಿಯೆ, ನಿನ್ನನ್ನು ಯಾರೆಂದು ತಿಳಿದುಕೊಳ್ಳಲಿ?

**ತಾಪಸಿ**— ನನ್ನನ್ನು ಆತ್ರೇಯಿ ಎಂಬುದಾಗಿ ಕರೆಯುವರು.

**ವನದೇವತೆ**—ಪೂಜ್ಯಳಾದ ಆತ್ರೇಯಿ, ಯಾವ ಕಡೆಯಿಂದ ಇಲ್ಲಿಗೆ ದಯಮಾಡಿರುವೆ? ಈ ದಂಡಕಾರಣ್ಯಸಂಚಾರದ ಪ್ರಯೋಜನವೇನು?

**ತಾಪಸಿ**—

ಕಂ॥ ಇತ್ತಲಗಸ್ತ್ಯಪ್ರಮುಖರ್
ಬಿತ್ತಿಗರಿರ್ಪುದಕೆ ಪುತ್ತಿನಣುಗನ ಬಳಿಯಿಂ ।
ದಿತ್ತಣ್ಗೆ ಬಂದೆನಿವರಿಂ
ದುತ್ತಮವೇದಾಂತಸಾರವಂ ತಿಳಿಯಲ್ಕಾಂ ॥ ೩ ॥

**ವನದೇವತೆ**—ವೇದಾಂತರಹಸ್ಯವನ್ನು ತಿಳಕೊಳ್ಳಬೇಕೆಂದು ಪೂಜ್ಯರಾದ ಮುನಿಗಳೆಲ್ಲರೂ ಬ್ರಹ್ಮಜ್ಞಾನಿಯಾದ ವಾಲ್ಮೀಕಿಯನ್ನೇ ಉಪಾಸನೆ ಮಾಡುತ್ತಿರುವರು. ಆದರೆ, ನಿನ್ನ ಈ ಪ್ರವಾಸದ ಸಾಹಸವೇನೋ ತಿಳಿಯಲಾರೆನು.

**ತಾಪಸಿ**—ಆ ವಾಲ್ಮೀಕಿ ಮುನಿಯು ಸನ್ನಿಧಾನದಲ್ಲಿ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಅಡ್ಡಿಯುಂಟಾಯಿತೆಂಬುದರಿಂದಲೇ ಈ ದೀರ್ಘಪ್ರವಾಸವನ್ನು ಕೈಗೊಂಡಿರುವೆನು.

**ವನದೇವತೆ**—ಅಂತಹ ಅಡ್ಡಿಯೇನೊ?

**ತಾಪಸಿ**—ಕೇಳಬೇಕು. ಸ್ತನ್ಯಪಾನವನ್ನು ಬಿಡುವ ವಯಸ್ಸಿನಲ್ಲಿ ಅತ್ಯಾಶ್ಚರ್ಯವನ್ನು ಉಂಟುಮಾಡುವ ಬಾಲಕಯುಗಲವನ್ನು ದೇವತೆಯೊಬ್ಬಳು ಸಂಗಡ ಕರಕೊಂಡು ಬಂದು ವಾಲ್ಮೀಕಿಮುನಿಗೆ ಸಮರ್ಪಿಸಿದಳು. ಆ ಬಾಲಕಯುಗಲವಾದರೊ ಮಹರ್ಷಿಯ ಮನಸ್ಸನ್ನು ಮಾತ್ರವಲ್ಲದೆ ಪಶುಪಕ್ಷಿ ಮೊದಲಾದ ಪ್ರಾಣಿವರ್ಗಗಳ ಅಂತಃಕರಣಗಳನ್ನೂ ಸ್ನೇಹಗೊಳಿಸುತ್ತಿರುವುದು.

**ವನದೇವತೆ**—ಅವರ ಹೆಸರೇನೆಂದು ತಿಳಿದಿರುವುದೇನು?

**ತಾಪಸಿ**— ಹೌದು! ಆ ದೇವತೆಯೇ ಅವರ ಮಹಿಮೆಗಳನ್ನು ವರ್ಣಿಸುವುದರೊಂದಿಗೆ ಕುಶಲವರೆಂಬ ಹೆಸರುಗಳನ್ನೂ ಹೇಳಿರುವಳು.

**ವನದೇವತೆ**— ಅಂತಹ ಮಹಿಮೆಯದೇನು?

**ತಾಪಸಿ**— ಆ ಬಾಲಕರಿಗೆ ರಹಸ್ಯಯುಕ್ತಗಳಾದ ಜೃಂಭಕಾಸ್ತ್ರಗಳು ಜನ್ಮಸಿದ್ಧಗಳಾಗಿರುವುವು.

**ವನದೇವತೆ**— ಇದು ಆಶ್ಚರ್ಯಕರವೇ ಸರಿ.

**ತಾಪಸಿ**— ಪೂಜ್ಯನಾದ ವಾಲ್ಮೀಕಿಯು ಆ ಬಾಲಕರನ್ನು ಮಾತೃಭಾವದಿಂದ ಲಾಲಿಸುತ್ತಿರುವನಲ್ಲದೆ ಸರ್ವವಿಧದಿಂದಲೂ ಪಾಲಿಸುತ್ತಿರುವನು. ತಾನೇ ಅವರಿಗೆ ಚೌಲಕರ್ಮವನ್ನು ನೆರವೇರಿಸಿ ವೇದಗಳ ಹೊರತು ಮಿಕ್ಕ ಎಲ್ಲಾ ವಿದ್ಯೆಗಳನ್ನೂ ಸಾವಧಾನವಾಗಿ ಉಪದೇಶಿಸಿರುವನು. ಬಳಿಕ ಹನ್ನೊಂದನೆಯ ಪ್ರಾಯದಲ್ಲಿ ಕ್ಷತ್ರಿಯರ ಪದ್ಧತಿಯಂತೆ ಅವರಿಗೆ ಉಪನಯನವಮಾಡಿ ವೇದಗಳನ್ನೂ ಕಲಿಸಿರುವನು. ಕುಶಾಗ್ರಮತಿಗಳಾದ ಆ ಬಾಲಕರೊಂದಿಗೆ ಸಹಪಾಠಿಗಳಾಗಿ ನಮ್ಮಂತಹ ಜನಸಾಮಾನ್ಯರು ಕಲಿತುಕೊಳ್ಳಲು ಅವಕಾಶವಿಲ್ಲ. ಯಾಕೆಂದರೆ—

— ಚಂಪಕಮಾಲೆ —

ಗುರುವರನಾ ಮುನೀಷಿಗುಪದೇಶಿಪವೊಲ್ಜಡನಲ್ಲಿಯಲ್ಲದಾ
ವರಮತಿಶಕ್ತಿಯಂ ಗುರುವೆ ವರ್ಧಿಪನಿಲ್ಲ ಕೆಡಿಪ್ಪನಿಲ್ಲವೌ ।
ಬರೆವರೆ ತೋರಿವಪೂರ್ವದವರಾ ಫಲದಲ್ಲಿಯೆ ಭೇದಮೆಂತೆನ
ಲ್ವರಮಣಿ ಬಿಂಬಮಂ ಗ್ರಹಿಪುದಲ್ಲದೆ ಮೃತ್ತಿಕೆಯೇಂ ಗ್ರಹಿಪ್ಪುದೇ ॥ ೪ ॥

**ವನದೇವತೆ**— ವಿದ್ಯಾಭ್ಯಾಸಕ್ಕೆ ಒಂದ ವಿಘ್ನವು ಇದಲ್ಲವೆ?

**ತಾಪಸಿ**—ಅದು ಮಾತ್ರವಲ್ಲ.

**ವನದೇವತೆ**— ಮತ್ತಿನ್ನೇನು?

**ತಾಪಸಿ**— ಆ ಬ್ರಹ್ಮಜ್ಞಾನಿಯಾದ ವಾಲ್ಮೀಕಿಯು ಒಂದಾನೊಂದು ಮಧ್ಯಾಹ್ನದಲ್ಲಿ ಅನುಷ್ಠಾನವನ್ನು ನೆರವೇರಿಸುವುದಕ್ಕಾಗಿ ತಮಸಾನದಿಯ ದಾರಿಹಿಡಿದು ಹೋಗುತ್ತಿದ್ದನು. ಆಗ ಬೇಡನೊಬ್ಬನು ಅಲ್ಲಿದ್ದ ಕ್ರೌಂಚ

ಯುಗ್ಮದಲ್ಲಿ ಗಂಡನ್ನು ಗುರಿಯಿಟ್ಟು ಕೊಲ್ಲುತ್ತಿದ್ದನು. ಅದನ್ನು ನೋಡಿ ದೊಡನೆ ಋಷಿಮುಖದಿಂದ ಅನುಷ್ಟುಪ್ ಛಂದೋ ರೂಪವಾದ ವಾಣಿಯು ಹೀಗೆ ಆವಿರ್ಭವಿಸಿತು—

— ಅನುಷ್ಟುಪ್ —

ಮಾಲುಬ್ಧಕನೆ ನೀನಾಕಲ್ಪಂಬರಂ ಬರ್ದುಕಿರ್ಪುದೇಂ
ವೇಳೆಗೈತಂದು ನೀಂ ಕ್ರೌಂಚಯುಗ್ಮದಿಂ ಕೊಂದೆಕಾಮಿಯಂ ॥ ೫ ॥

ವನದೇವತೆ— ವೇದಗಳಲ್ಲಿ ಮಾತ್ರವಲ್ಲದೆ ಬೇರೆಕಡೆಯಲ್ಲೂ ನೂತನಛಂದಸ್ಸುಗಳ ಆವಿರ್ಭಾವವೆಂಬುದು ಸೋಜಿಗವು.

ತಾಪಸಿ— ಮತ್ತೆ ಅದೇ ಸಮಯದಲ್ಲೇ ಸೃಷ್ಟಿಕರ್ತನಾದ ಬ್ರಹ್ಮನು ತಾನೇ ಪ್ರತ್ಯಕ್ಷನಾಗಿ ವಾಲ್ಮೀಕಿಮುನಿಯೊಡನೆ ಹೀಗೆಂದನು—"ಮುನಿಯೇ ನೀನು ಶಬ್ದಬ್ರಹ್ಮಪ್ರಕಾಶವುಳ್ಳವನು! ಆದುದರಿಂದ ಶ್ರೀರಾಮಚರಿತ್ರೆ ಯನ್ನು ಮಹಾಕಾವ್ಯರೂಪವಾಗಿ ರಚಿಸುವವನಾಗು! ಶಾಶ್ವತಬ್ರಹ್ಮ ಸ್ವರೂಪವು ಸ್ಫುಟವಾಗಿ ತೋರುವಂತೆ ನಿನಗೆ ಜ್ಞಾನದೃಷ್ಟಿಯುಂಟಾಗಲಿ! ನೀನೇ ಆದಿಕವಿಯಾಗಿರುವೆ!" ಎಂದು ಹೇಳಿ ಅಂತರ್ಹಿತನಾದನು. ಬಳಿಕ ಪೂಜ್ಯನಾದ ವಾಲ್ಮೀಕಿಯು ಮನುಷ್ಯರಲ್ಲಿ ಮೊದಲಾಗಿ ಆವಿರ್ಭವಿಸಿ ದುದೂ ವೇದಾತ್ಮಕವೂ ಶಬ್ದಬ್ರಹ್ಮನ ರೂಪಾಂತರವೂ ಇತಿಹಾಸವೂ ಎನಿ ಸಿರುವ ರಾಮಾಯಣಮಹಾಕಾವ್ಯವನ್ನು ರಚಿಸಿದನು.

ವನದೇವತೆ—ಆಹಾ! ವಿರಕ್ತನಾದ ಮುನಿಗೆ ವಿಸ್ತಾರವಾದ ಸಂಸಾರವು.

ತಾಪಸಿ—ಆದುದರಿಂದಲೇ ಅಲ್ಲಿ ಅಧ್ಯಯನಕ್ಕೆ ವಿಘ್ನವೊದಗಿ ತೆಂದು ಹೇಳಿದೆನು.

ವನದೇವತೆ—ಯುಕ್ತವೇ ಸರಿ.

ತಾಪಸಿ—ಮಂಗಳಶೀಲೇ, ನಿನ್ನ ಸತ್ಕಾರದಿಂದ ನಾನು ವಿಶ್ರಾಂತಿ ಹೊಂದಿದೆನು. ಇನ್ನು ನನಗೆ ಅಗಸ್ತ್ಯಾಶ್ರಮಕ್ಕೆ ಹೋಗತಕ್ಕ ದಾರಿ ಯನ್ನು ತೋರಿಸಬೇಕು.

**ವನದೇವತೆ**—ಇಲ್ಲಿಂದ ಹೀಗೆಯೇ ಹೋದರೆ ಪಂಚವಟಿಯನ್ನು ಸೇರಬಹುದು. ಅಲ್ಲಿಂದ ಗೋದಾವರೀತೀರದ ದಾರಿಹಿಡಿದು ಹೋಗುವುದು ಬಹುಸುಲಭವು.

**ತಾಪಸಿ**—(ಕಂಬನಿದುಂಬಿ) ಇಲ್ಲೇ ಸಮೀಪ ತೋರುವುದು ತಪೋವನವೇನು? ಬಳಿಯಲ್ಲಿರುವುದು ಪಂಚವಟಿಯೇನು? ಆ ಪಕ್ಕದಲ್ಲಿ ತೋರುತ್ತಿರುವುದು ಗೋದಾವರೀನದಿಯೇನು? ಅದೋ ದೂರಕ್ಕೆ ರಾರಾಜಿಸುತ್ತಿರುವುದು ಪ್ರಸ್ರವಣಗಿರಿಯೇನು? ಕೊನೆಗೆ ನೀನೇನು ಜನಸ್ಥಾನವನದೇವತೆಯಾದ ವಾಸಂತಿಯು?

**ವನದೇವತೆ**—ಎಲ್ಲವೂ ಹಾಗೆಯೇ ಸರಿ.

**ತಾಪಸಿ**—ಹಾ! ಮಗಳೆ ಜಾನಕಿ!

**ಕಂ||** ಪ್ರೀತಿವಿವರ್ಧಿತಮೀ ತರು
ಜಾತಮಿದೋ ಕೀರ್ತಿಶೇಷಳಾಗಿರೆಯುಂ ನೀಂ।
ಮಾತಿನ ಸಂದರ್ಭದೆ ಮುಂ—
ದೈತರುತಿರ್ಪಂತೆ ಕಾಣ್ಬೆವಿದರಿಂ ನಿನ್ನಂ || ೬ ||

**ವನದೇವತೆ**—(ಹೆದರುತ್ತ ಸ್ವಗತಂ) ಸೀತೆಯು ನಾಮಾವಶಿಷ್ಟಳೆಂದು ಹೇಳಲು ಕಾರಣವೇನೊ? (ಪ್ರಕಾಶಂ) ಪೂಜ್ಯಳೇ ಸೀತಾದೇವಿಗೆ ಬಂದಿರುವ ಅಂತಹ ವಿಪತ್ತೇನು?

**ತಾಪಸಿ**—ಸೀತೆಗೆ ವಿಪತ್ತು ಮಾತ್ರವಲ್ಲ; ಅಪವಾದವೂ ಕೂಡ ಬಂದಿರುವುದು. (ಹೀಗಂತೆ ಎಂಬುದಾಗಿ ಅದನ್ನು ಕಿವಿಯಲ್ಲಿ ಹೇಳುವಳು)

**ವನದೇವತೆ**—ಆಹಾ! ಕಷ್ಟವೇ! ದೈವಗತಿಯೆಂಬ ಬರಸಿಡಿಲ ಹೊಡೆತವು ದುಸ್ಸಹವಾದುದು. (ಎಂದು ಹೇಳುತ್ತ ಮೂರ್ಛೆಹೊಂದುವಳು)

**ತಾಪಸಿ**—ಮಂಗಳಶೀಲೆ, ಸಮಾಧಾನ ತಂದುಕೊ! (ಎಂದು ಉಪಚರಿಸುವಳು)

**ವನದೇವತೆ**—(ಮೆಲ್ಲನೆ ಮೂರ್ಛೆತಿಳಿದು) ಹಾ ಪ್ರಿಯಸಖಿಯಾದ ಸೀತೆ, ನಿನ್ನ ಜನ್ಮಕ್ಕಿರುವ ಫಲವಿದೇನು? ಹಾ ರಾಮಭದ್ರ! ಅಥವಾ

ನಿನ್ನಿಂದ ಆಗತಕ್ಕುದೇನು? ಪೂಜ್ಯಳಾದ ಆತ್ರೇಯಿ, ಲಕ್ಷ್ಮಣನು ಆ ಗೊಂಡಾರಣ್ಯದಿಂದ ಹಿಂತಿರುಗಿದ ಮೇಲೆ ಸೀತೆಯ ಗತಿಯೇನಾಯಿತೆಂಬ ವೃತ್ತಾಂತವೇನಾದರೂ ತಿಳಿದಿರುವುದೇನು ?

ತಾಪಸಿ— ಅದೇನೂ ತಿಳಿದಿಲ್ಲವಲ್ಲ.

ವನದೇವತೆ— ಕಷ್ಟವೇ! ಪೂಜ್ಯರಾದ ಅರುಂಧತೀವಸಿಷ್ಠರೇ ಉಪದೇಶಿಸುವ ಗುರುಗಳಾಗಿರಲು ಅರಮನೆಗಳಲ್ಲಿ ಮಹಾರಾಜಪತ್ನಿಯರಾದ ಕೌಸಲ್ಯೆ ಮೊದಲಾದ ಹಿರಿಯರು ಬದುಕಿರಲು ಈ ದುರ್ಘಟನೆಯು ಹೇಗೆ ತಾನೇ ಸಂಭವಿಸಿತೋ ?

ತಾಪಸಿ— ಆ ಕಾಲದಲ್ಲಿ ಗುರುಹಿರಿಯರೆಲ್ಲರೂ ಋಷ್ಯಶೃಂಗನ ಯಜ್ಞಕ್ಕಾಗಿ ಹೋಗಿದ್ದರು. ಹನ್ನೆರಡು ವರ್ಷಗಳಿಂದ ಮುಗಿಯತಕ್ಕ ಯಜ್ಞವೀಗ ಪೂರ್ತಿಯಾಗಿರುವುದು. ಋಷ್ಯಶೃಂಗನಿಂದ ಸಂಭಾವಿತರಾಗಿ ಅವರೆಲ್ಲರೂ ಅಲ್ಲಿಂದ ಬೀಳ್ಕೊಳ್ಳುವ ವೇಳೆಗೆ ಅರುಂಧತೀದೇವಿಯು ವಧುವಾದ ಸೀತೆಯಿಲ್ಲದ ಅಯೋಧ್ಯೆಗೆ ನಾನಿನ್ನು ಬರಲಾರೆನೆಂದು ಹೇಳಿದಳು. ಆಗ ರಾಜಮಾತೆಯರೂ ಅದೇ ಅಭಿಪ್ರಾಯವನ್ನೇ ಪ್ರಕಟಿಸಿಕೊಂಡರು. ಅವರೆಲ್ಲರ ಮಾತಿನ ಮೇರೆಗೆ ಭಗವಂತನಾದ ವಸಿಷ್ಠನಿಗೂ ವಾಲ್ಮೀಕಿಮುನಿಯ ಆಶ್ರಮಕ್ಕೆ ಹೋಗಿ ಅಲ್ಲಿರಬಹುದೆಂಬ ಯೋಚನೆಯುಂಟಾಯಿತು.

ವನದೇವತೆ— ಆದರೀಗ ರಾಮಭದ್ರನು ತಾನು ಏನುಮಾಡುತ್ತಿರುವನೊ ?

ತಾಪಸಿ— ಆ ಅರಸನೀಗ ರಾಜರಿಗೆ ಸಾಧಾರಣವಾಗಿರತಕ್ಕ ಅಶ್ವಮೇಧಯಾಗವನ್ನು ಕೈಗೊಂಡಿರುವನು.

ವನದೇವತೆ— ಕಷ್ಟವೇ! ಅವನು ಮತ್ತೊಮ್ಮೆ ಮದುವೆಮಾಡಿಕೊಂಡನೆ ?

ತಾಪಸಿ— ಛೆ! ಛೆ! ಹಾಗೆ ಮಾಡಿಕೊಂಡಿಲ್ಲ!

ವನದೇವತೆ— ಹಾಗಾದರೆ ಆ ಮಹಾಯಜ್ಞದಲ್ಲಿ ಸಹಧರ್ಮಿಣಿಯು ಯಾವಳಾಗಿರಬಹುದು ?

**ತಾಪಸಿ**— ಸುವರ್ಣದ ಸೀತೆಯೇ ಧರ್ಮಪತ್ನಿಯು.

**ವನದೇವತೆ**— ಇದೀಗ ಆಶ್ಚರ್ಯವು –

**ಕಂ॥** ಲೋಕದೊಳುತ್ತಮರಿರ್ದಯದು
ಬೇಕೆಂದೊಡೆ ವಜ್ರದಿಂದೆಯುಂ ಕಠಿನತರಂ ।
ಸಾಕೆನೆ ಸುಮದಿಂ ಮೃದುಲಮ
ದೇಕೆಂಬುದರಡಿಯನರಿವುದಾರಿಂದಕ್ಕುಂ ॥ ೭ ॥

**ತಾಪಸಿ**— ವಾಮದೇವನೆಂಬ ಮುನಿಯ ಅನುಜ್ಞೆಯ ಮೇರೆಗೆ ಯಜ್ಞೀಯಾಶ್ವವು ಬಿಡಲ್ಪಟ್ಟಿರುವುದು. ವಿಧಿಯನ್ನನುಸರಿಸಿ ಶೂರರು ಅದರ ಬೆಂಗಾವಲಾಗಿ ಹೊರಟಿರುವರು. ಲಕ್ಷ್ಮಣನ ಸುಕುಮಾರನಾದ ಚಂದ್ರಕೇತುವು ದಿವ್ಯಾಸ್ತ್ರಗಳ ಉಪದೇಶವನ್ನು ಪಡೆದುಕೊಂಡು ಅವರೆಲ್ಲರ ಅಧಿನಾಯಕನಾಗಿ ಚತುರಂಗಸೇನೆಯೊಂದಿಗೆ ಸಾಗಿರುವನು.

**ವನದೇವತೆ**--(ಸಂತೋಷಸ್ನೇಹಕುತೂಹಲಗಳೊಡನೆ ಕಂಬನಿಸುರಿಸುತ್ತ) ತಾಯೇ, ಲಕ್ಷ್ಮಣನಿಗೆ ವೀರಸುಕುಮಾರನು ಜನಿಸಿರುವನೆಂಬುದನ್ನು ಕೇಳಿ ಬದುಕಿಕೊಳ್ಳುವೆನು.

**ತಾಪಸಿ**— ಅಷ್ಟರಲ್ಲೇ ಬ್ರಾಹ್ಮಣನೊಬ್ಬನು ಸತ್ತುಹೋದ ತನ್ನ ಬಾಲಕನ ಕಳೇವರವನ್ನು ರಾಜದ್ವಾರದಲ್ಲಿ ತಂದು ಹಾಕಿ ಎದೆಗೆ ಹೊಡೆಕೊಳ್ಳುತ್ತ "ಗತಿಯಿಲ್ಲದಾದ ನನ್ನನ್ನು ಕಾಪಾಡಬೇಕು" ಎಂದು ಗಟ್ಟಿಯಾಗಿ ಗೋಳಾಡಿದನು. ಅದನ್ನು ಕೇಳಿ ಪರಮಕಾರುಣಿಕನಾದ ರಾಮಭದ್ರನು ರಾಜದೋಷದಿಂದಲ್ಲದೆ ಪ್ರಜೆಗಳಿಗೆ ಅಕಾಲಮರಣವು ಬರಲಾರದೆಂದು ತನ್ನ ದೋಷವನ್ನೇ ಯೋಚಿಸುತ್ತಿದ್ದನು. ಆಗಲೇ ಅಶರೀರವಾಣಿಯೊಂದು ಹೀಗೆ ಕೇಳಿಸಿತು –

**ಕಂ॥** ವಸುಧೆಯೊಳಧರ್ಮದಿಂ ತಪ
ವೆಸಗುವ ಶಂಬೂಕನೆಂಬ ಶೂದ್ರನ ತಲೆಯಂ ।
ವಸುಧೇಶನೆ ಕಡಿಯುತೆ ಬರ್ದು
ಕಿಸು ನೀಂ ಬೇಗನೆ ದ್ವಿಜನ್ಮನಾ ಮೃತಶಿಶುವಂ ॥ ೮ ॥

ಅದನ್ನು ಕೇಳಿ ಅರಸನಾದ ರಾಮಚಂದ್ರನು ಖಡ್ಗಪಾಣಿಯಾಗಿ ಪುಷ್ಪಕ

ವಿಮಾನವೇರಿಕೊಂಡು ಶೂದ್ರತಪಸ್ವಿಯನ್ನು ಹುಡುಕುತ್ತ ದಿಕ್ಕುವಿದಿಕ್ಕು ಗಳಲ್ಲಿ ಸಂಚರಿಸತೊಡಗಿದನು.

**ವನದೇವತೆ**— ಶಂಬೂಕನೆಂಬ ಶೂದ್ರನು ತಲೆಕೆಳಗಾಗಿ ನಿಂತು ಕೊಂಡು ಧೂಮಪಾನಮಾಡುತ್ತ ಈ ಜನಸ್ಥಾನದಲ್ಲೇ ಕಠಿನವಾದ ತಪ ಸ್ಸನ್ನು ಆಚರಿಸುತ್ತಿರುವನು. ಆದುದರಿಂದ ರಾಮಭದ್ರನಿನ್ನೊಮ್ಮೆ ಈ ಅರಣ್ಯವನ್ನು ಅಲಂಕರಿಸುವನೆ?

**ತಾಪಸಿ**— ಹೌದು! ಅವನೀಗಲೇ ಇಲ್ಲಿಗೆ ಬರಬಹುದು. ಮಂಗಳ ಶೀಲೆ, ನಾನಿನ್ನು ಹೋಗುವೆನು.

**ವನದೇವತೆ**— ಪೂಜ್ಯಳಾದ ಆತ್ರೇಯೀ ಹಾಗೆಯೇ ಆಗಲಿ! ಈಗ ಮಧ್ಯಾಹ್ನದ ಬಿಸಿಲು ಕಠಿನವಾಗುತ್ತ ಬಂತು. ಆದುದರಿಂದಲೇ—

— ಮತ್ತೇಭವಿಕ್ರೀಡಿತ —

ಜಳದೊಂದೀ ಬಲು ಸಂಕಟಂ ತಡೆಯದೆಂದೈತಂದ ನೀಡೋದ್ಭವಂ
ಗಳ ಕೂಟಕ್ಕೆ ಸದಾಶ್ರಯಂಗಳೆನಿಪೀ ವೃಕ್ಷಂಗಳೇ ತೀರದೊಳ್ ।
ಬಳಗಂಗೂಡುತೆ ಬಂದ ಮತ್ತಗಜಗಂಡೋದ್ಘರ್ಷಣತ್ರಾಸದಿಂ
ಜಳಮಂ ಭಕ್ತಿಯೊಳರ್ಚಿಪಂತೆಯೆ ಸುಮಂ ಬಿಳ್ದಪ್ಪುದೊಂದಾಗುತುಂ

(ಎಂದು ಹೊರಟು ಹೋಗುವರು) ॥ ೮ ॥

**ಇಂತಿದು ಶುದ್ಧವಿಷ್ಕಂಭಂ**

---

(ಬಳಿಕ ಒರೆಗಳಚಿದ ಖಡ್ಗವನ್ನು ಹಿಡಿದುಕೊಂಡು ಕಾರುಣಿಕನಾದ ರಾಮನು ಪುಷ್ಪಕವಿಮಾನಾರೂಢನಾಗಿ ಪ್ರವೇಶಿಸುವನು.)

**ರಾಮ**— — ಮತ್ತೇಭವಿಕ್ರೀಡಿತ —

ಎಲೆಲೇ ದಕ್ಷಿಣಹಸ್ತಮೇ ದ್ವಿಜಸುತಂ ಜೀವಿಪ್ಪ ಸತ್ಕಾರ್ಯಕೀ
ಗಲೆ ನೀಂ ಖಡ್ಗದಿನಿಟ್ಟು ಶೂದ್ರಮುನಿಯಂ ಸಂಹಾರಮಂ ಗೆಯ್ವುದೈ ।

ಒಲಿದಿರ್ದಾ ಪ್ರಿಯಪತ್ನಿ ಗರ್ಭಭರದಿಂ ದುಃಖಾರ್ತಳಾಗಿರ್ದೊಡಂ
ನಲವಿಂದಂ ವಿಪಿನಕ್ಕೆ ನೂಂಕುತವಳಂ ಪೆರ್ಚಿರ್ಪೆ ಕಾರುಣ್ಯಮೇಂ

॥ ೧೦ ॥

(ಹೇಗಾದರೂ ಹೊಡೆದು) ಕಠಿನಚಿತ್ತನಾದ ರಾಮನಿಗೆ ಯೋಗ್ಯವಾಗಿರುವ ಕಾರ್ಯವನ್ನೇ ಮಾಡಿರುವೆನು. ಇನ್ನಾದರೂ ಆ ಬ್ರಾಹ್ಮಣನ ಮೃತ ಶಿಶುವು ಜೀವಿಸುವುದೆ?

**ಶಂಬೂಕ**— (ದಿವ್ಯಪುರುಷನಾಗಿ ಪ್ರವೇಶಿಸಿ) ಮಹಾರಾಜನಿಗೆ ಜಯ ವಾಗಲಿ! ಜಯವಾಗಲಿ!

— ಚಂಪಕಮಾಲೆ —

ಅಭಯಮನಿತ್ತು ದೇವ ಯಮನಿಂದಲೆ ದಂಡಮನೀಳ್ದಿರಲ್ಕೆ ನೀ
ನಭಯಮದಲ್ಲಮೇ! ದ್ವಿಜಕುಮಾರಕನಂತಳಿದುಂ ಬದುರ್ಕಿದಂ ।
ಅಭಿನುತಿಪಾನೆ ಶೂದ್ರಮುನಿಯೆಂ! ಸಲೆ ವೃದ್ಧಿಯನಾಂತೆನೆಂದೊಡೇ
ನಭಿಭವಮಾದೊಡಂ ಸುಜನಸಂಗಮೆ ನೀಗಿಸುಗುಂ ಭವಾಬ್ಧಿಯಂ

॥ ೧೧ ॥

**ರಾಮ**— ಎಲೈ ದಿವ್ಯಪುರುಷನೆ, ನಿನಗೆ ದೇವತ್ವವುಂಟಾದುದೂ, ಆ ಬ್ರಾಹ್ಮಣನ ಮೃತಶಿಶುವು ಬದುಕಿದುದೂ ನನಗೆ ಪ್ರಿಯವೇ ಸರಿ! ಆದರೆ ನೀನೀಗ ಉಗ್ರವಾದ ತಪಸ್ಸಿನ ಫಲವನ್ನು ಅನುಭವಿಸಬೇಕು—

**ಕಂ॥** ಎತ್ತಲ್ಪರಮಾನಂದಮ
ದೆತ್ತಲ್ಸಂತಸದ ಪುಣ್ಯಸಂಪತ್ತುಗಳಿ ।
ನ್ನೆತ್ತಲ್ವೈರಾಜಂಗಳ
ವತ್ತಲೆ ನಿನಗಕ್ಕೆ ದಿವ್ಯವಸತಿಗಳಿಂದೇ ॥ ೧೨ ॥

**ಶಂಬೂಕ**— ಮಹಾಪ್ರಭುವೆ, ಶೂದ್ರನಾಗಿ ಜನಿಸಿದ ನನಗೆ ಈ ಮಹಿಮೆಯು ತಮ್ಮ ಅನುಗ್ರಹದ ಮೂಲಕವೇ ಸಂಭವಿಸಿದುದಲ್ಲದೆ ತಪಸ್ಸಿನಿಂದ ಆದುದೇನು? ಅಥವಾ, ತಪಸ್ಸೇ ನನಗೆ ಹೆಚ್ಚಿನ ಫಲ ದಾಯಕವು—

— ಮತ್ತೇಭವಿಕ್ರೀಡಿತ —

ಉರಿ ಮೂಲೋಕಮೆ ದೇವನಂ ಪುಡುಕೆಯುಂ ನೀಂ ಗೋಚರಿಪ್ಪಾ! ಚಿರಂ
ಸ್ಥಿರಮಿದಾರ್ ಪುರಿಯಿಂದೆ ಮಚ್ಛಿ ವೃಷಲಂ ದಂಡ್ಯಂಗಡಾ ಎಂದು ನೀಂ
ಬರುತುಂ ದೂರದಯೋಧ್ಯೆಯಿಂದೆ ಗಹನಕ್ಕೀ ದಂಡಕಾಮಧ್ಯಕಂ
ನೆರೆ ಮೈದೋರ್ದ ತಪಃಫಲಂ ವಲಮಿದೆಂಬೆಂ ಬೇರದೇಂಕಾರಣಂ ॥ ೧೩ ॥

**ರಾಮ**— ಇದೇನು! ದಂಡಕಾರಣ್ಯವೆ? (ಎಂದು ಸುತ್ತಲೂ ನೋಡಿ)
ಅದಲ್ಲದೆ ಮತ್ತಾವುದು—

— ಮಹಾ ಸ್ರಗ್ಧರೆ —

ಪಿರಿದುಂ ವಿಸ್ತಾರದಿಂದಂ ನಿಬಿಡಿತತರುವೃಂದೋತ್ಕಟಚ್ಛಾಯೆಯಿಂದಂ
ಭರದಿಂದೋಡುತ್ತಲಿರ್ಪಾ ನದಿಗಳ ದನಿಯಂ ನಾದಿಪದ್ರೀಂದ್ರದಿಂದಂ ।
ವರತೀರ್ಥಾರಣ್ಯಪರ್ಣಾಶ್ರಮಗಿರಿತಟಿನೀಪೂರಸಂಮಿಶ್ರದಿಂದಂ
ನೆರೆ ಸಂಭೋಗ್ಯಂ ಮನಕ್ಕಂ ಪರಿಚಿತಮೆನಿಕುಂ ದಂಡಕಾರಣ್ಯಭಾಗಂ
॥ ೧೪ ॥

ಇಲ್ಲಿ ನೀವು ವಾಸಿಸುತ್ತಿದ್ದಂದು—

**ಕಂ॥** ಕದನಕೆ ಮುಂಬರೆ ಬಿಡಲಾ
ರದೆ ದೂಷಣತ್ರಿಶಿರಖರರನೊಡನೆಯೆ ತರಿದಿರ್ ।
ಪದಿನಾಲ್ಕಲ್ಲದೆ ಮತ್ತಂ
ಪದಿನಾಲ್ಸಾಸಿರಕೆ ಮೇಲೆ ಕೇಡಾಳಿಗಳಂ ॥ ೧೫ ॥

ಹಾಗೆ ದುಷ್ಟಸಂಹಾರವಾದುದರಿಂದಲೇ ಸಿದ್ಧಕ್ಷೇತ್ರವಾದ ಈ ಜನಸ್ಥಾನ
ದಲ್ಲಿ ನಮ್ಮಂತಹ ಜನರು ನಿರ್ಭಯವಾಗಿ ಸಂಚರಿಸುವಂತಾಯಿತು.

**ರಾಮ**— ಇದು ದಂಡಕಾರಣ್ಯ ಮಾತ್ರವಲ್ಲದೆ ಜನಸ್ಥಾನವೂ
ಆಗಿರುವುದೆ?

**ಶಂಬೂಕ**— ಮಹಾಸ್ವಾಮಿ, ನಿಶ್ಚಯವಾಗಿಯೂ ಇದು ಜನ
ಸ್ಥಾನವು. ಇದರ ದಕ್ಷಿಣಭಾಗದಲ್ಲಿ ಸಕಲಜೀವಜಾಲಗಳಿಗೂ ರೋಮಾಂ
ಚಕಾರಿಗಳಾದ ದುಷ್ಟಮೃಗಗಳ ಗುಂಪುಗಳಿಂದ ತುಂಬಿದ ಗಿರಿಕಂದರ

ಗಳುಳ್ಳ ಘೋರಾರಣ್ಯಗಳು ವ್ಯಾಪಿಸಿಕೊಂಡಿರುವುವು. ಆ ಭಾಗದಲ್ಲೆಲ್ಲಿ ನೋಡಿದರೂ—

— ಮತ್ತೇಭವಿಕ್ರೀಡಿತ —

ಇದು ನಿಶ್ಶಬ್ದದೆ ಭೀಕರಂ! ನಿಕೃತಿಘೀಂಕಾರಂಗಳಿಂ ಭೀಕರಂ
ಪುದಿದಾ ಗರ್ತದೊಳಿರ್ಪ ಲೇಶಜಲಮುಂ ಬತ್ತಲ್ಕೆ ತೃಷ್ಣಾಕರಂ।
ಅದರಿಂದೋತಿ ಬಳಲ್ದು ತಾನಜಗರಸ್ವೇದಾಂಬುವಂ ಪೀರುತಿ
ರ್ಪುದರಿಂ! ಜಿಹ್ಮಗನಿದ್ರೆಗೆಳ್ದ ವಿಷವಹ್ನಿಜ್ವಾಲೆಯಿಂ ಭೀಕರಂ ॥ ೧೬ ॥

**ರಾಮ**—

**ಕಂ॥** ಇದುವೆ ಜನಸ್ಥಾನಂ ತಾ
ನಿದರೊಳೆ ಧೂರ್ತಂ ಖರಾಸುರಂ ವಾಸಿಸಿದಂ।
ಮೊದಲಿಂದೆಲ್ಲಮುಮಂ ನೋ
ಡಿದ ರೀತಿಯೊಳಿಂದು ಕಾಣ್ಬುದೆನ್ನಯ ಚಿತ್ತಂ ॥ ೧೭ ॥

(ಸುತ್ತಲೂ ನೋಡಿ) ಸೀತೆಯು ರಾಮನನ್ನು ವಿಶೇಷವಾಗಿ ಪ್ರೀತಿಸುತ್ತಿದ್ದ ಉಪವನಪ್ರಾಂತಗಳಿಂದು ಮಹಾರಣ್ಯಗಳಾಗಿ ಪರಿಣಮಿಸಿವೆಯಲ್ಲಾ! ಇದಕ್ಕಿಂತಲೂ ಭಯಾನಕವಾದುದು ಮತ್ತಾವುದು? (ಎಂದು ಕಂಬನಿಗರೆಯುತ್ತ)

**ಕಂ॥** ಕಮಲಾಕ್ಷನೆ ನಿನ್ನೊಡನೆಯೆ
ಸುಮನೋಹರವನಗಳಲ್ಲಿ ವಾಸಿಪೆನೆಂದಾ।
ಕಮಲಮುಖಿ ಪೇಳ್ವಳೆಂದೆನೆ
ವಿಮಲಪ್ರೇಮಂ ತದೀಯಮತುಲಮದಲ್ತೇ ॥ ೧೮ ॥

**ಕಂ॥** ಸ್ವಸುಖಂಗಳಿಂದೆಪ್ರಿಯಜನ
ವ್ಯಸನಂಗಳನಂತೆ ನಿರಸಿಪರ್ ಪ್ರಿಯರಿನ್ನಲ್।
ವಸುಮತಿಯೊಳಾರ್ಗೆ ಪ್ರಿಯರಾ
ರಸಮಾನದ ಮರ್ದನಂತೆಯವರವರ್ಗೆಂದುಂ ॥ ೧೯ ॥

**ಶಂಬೂಕ**—ಸ್ವಾಮಿಯೆ, ಮನಸ್ಸಿಗೆ ವಿನೋದವನ್ನು ಉಂಟುಮಾಡಲಾರದ ಈ ಅರಣ್ಯಗಳಿಂದ ಪ್ರಯೋಜನವಿಲ್ಲ. ಇಲ್ಲೇ ಮುಂದೆ

ಮದಿಸಿದ ನವಿಲುಗಳ ಕಂಠಗಳಿಂದ ಶ್ಯಾಮಲವರ್ಣರಂಜಿತಗಳಾದ ಪರ್ವತಗಳಿಂದ ವ್ಯಾಪ್ತಗಳೂ, ದಟ್ಟವಾಗಿ ಹರಡಿದ ಹಸುರಿಲೆಗಳ ನೆರಳನ್ನು ಉಂಟುಮಾಡುವ ಮರಗಳ ಗುಂಪುಗಳಿಂದ ಶೋಭಾಯಮಾನಗಳೂ, ಧೈರ್ಯದಿಂದ ವರ್ತಿಸುತ್ತಿರುವ ನಾನಾಜಾತಿಯ ಮೃಗಸಮೂಹಗಳಿಂದ ಕೂಡಿದವುಗಳೂ ಎನಿಸಿ ಪ್ರಶಾಂತಗಂಭೀರಗಳಾಗಿರುವ ಮಹಾರಣ್ಯದ ಮಧ್ಯಭಾಗಗಳನ್ನು ನೋಡಬೇಕು—

ಮಾಲಿನಿ॥ ನೆರೆ ಕುಸುಮಿತವಾನೀರಂಗಳೊಳ್ಪಕ್ಷಿವೃಂದಂ
ಬರುತೆ ವಿಹರಿಸಲ್ಬಿಳ್ದಪ್ಪ ಪುಷ್ಪಂಗಳಿಂದಂ।
ಭರದಿನುದಿರ್ವ ಜಂಬೂನೇರಿಲಾ ಪಣ್ಗಳಿಂದಂ
ಬೆರೆದು ಪರಿವ ಸ್ರೋತಂ ಚಿತ್ತಕಾನಂದಮೆಂದುಂ ॥ ೨೦ ॥

ಅಷ್ಟು ಮಾತ್ರವಲ್ಲದೆ—

ಕಂ॥ ಗಿರಿಗಹ್ವರದೊಳ್ಮಲಗಿದ
ಕರಡಿಗಳಾ ಶ್ಲೇಷ್ಮಯುಕ್ತಘರ್ಘರರಾವಂ।
ಪರಿಸರದೊಳ್ಪರಿವುದಿದೋ
ಮುರಿದಿಡುತಿರೆ ಹಸ್ತಿ ಸಲ್ಲಕೀತರುಗಂಧಂ ॥ ೨೧ ॥

ರಾಮ—(ಕಂಬನಿಯೊಡನೆ ಗದ್ಗದಧ್ವನಿಯುಳ್ಳವನಾಗಿ) ಪುಣ್ಯವಂತನೆ, ನಿನಗೆ ಅಪೂರ್ವವಾದ ಉತ್ತಮಲೋಕಪ್ರಾಪ್ತಿಯಾಗುವುದು. ಆ ದಿವ್ಯಲೋಕಮಾರ್ಗಗಳು ನಿನಗೀಗಲೇ ಕ್ಷೇಮವನ್ನು ಉಂಟುಮಾಡಲಿ!

ಶಂಬೂಕ— ದೇವದೇವ, ನಾನೀಗಲೇ ಅಪೂರ್ವಬ್ರಹ್ಮವಾದಿಯಾಗಿರುವ ಅಗಸ್ತ್ಯಮುನಿಗೆ ಅಭಿವಂದಿಸಿ ಆತನ ಆಶೀರ್ವಾದಗಳನ್ನು ಪಡೆದು ತಮ್ಮ ನಿರೂಪದಂತೆ ಉತ್ತಮಲೋಕವನ್ನು ಸೇರಿಕೊಳ್ಳುವೆನು. (ಎಂದು ಸಾಷ್ಟಾಂಗವೆರಗಿ ಹೊರಟು ಹೋಗುವನು)

ರಾಮ— — ಶಾರ್ದೂಲವಿಕ್ರೀಡಿತ —

ಅಂದಾರಣ್ಯಕವೃತ್ತಿಯಲ್ಲಿರಿಯುಮಾಂ ಸಂಸಾರಸೌಖ್ಯಂಗಳ
ಲ್ಲೊಂದಾಗುತ್ತೆ ಗೃಹಸ್ಥಧರ್ಮರತರುಂ ಧರ್ಮೋಕ್ತಕರ್ಮಸ್ಥರುಂ ।

ಎಂದೋರಂತೆ ವನಾಂತದಲ್ಲಿ ಬಹುಕಾಲಂ ವಾಸಮಂ ಗೆಯ್ದೆವೋ
ಇಂದೆನ್ನೀ ನಯನಕ್ಕೆ ಗೋಚರಿಸಿತಾಹಾ ದಂಡಕಾರಣ್ಯಮೇ ॥ ೨೨ ॥
ಅಷ್ಟುಮಾತ್ರವಲ್ಲದೆ,

— ಚಂಪಕಮಾಲೆ —

ಗಿರಿಗಳವೇ ವನಸ್ಥಲಗಳಂತವೆ ಮತ್ತಮಯೂರಕೇಕೆಗಳ್
ನಿರುತಮುಮಂತೆ ಕೇಳೆವರುತಿರ್ಪುವವೇ ಹರಿಣಂಗಳಂತವೇ ।
ಬರೆವರೆ ಮಂಜುಮಂಜುಲರುತಂಗಳವೇ ಶ್ರುತಿಗೂಡುತಿರ್ಪುವಿಂ
ನಿರುಕಿಸಲೋವೊ ನೀಪನಿಚುಲಂಗಳವೇ ತಟಿನೀತಟಂಗಳೊಳ್ ॥ ೨೩ ॥

ಕಂ॥ ವಲಯಾಕೃತಿಯಿಂ ನಿರುಕಿಸೆ
ಜಲಧರನಿವಹಂಬೊಲಿಲ್ಲಿ ಪರ್ವತಮಿರ್ಕುಂ ।
ಒಲವಿನ ಪ್ರಸ್ರವಣಮಿದೇ
ನಿಲವಿಲ್ಲದೆ ಸರಿಯುತಿರ್ಪ ಗೋದಾವರಿಯುಂ ॥ ೨೪ ॥

ಅಂದಿಲ್ಲಿ—

ಮಾಲಿನಿ॥ ಇರಲಿದರಡಿಯೆಮ್ಮಾ ಪರ್ಣಶಾಲಾನಿವಾಸಂ
ಗಿರಿಶಿಖರಮಿದಂದಾ ಗೃಧ್ರರಾಜಂಗೆ ವಾಸಂ ।
ನೆರೆ ಮೆರೆವ ವನಾಂತಂ ಪಕ್ಷಿಸಂರಾವಯುಕ್ತಂ
ಸರಿವ ನದಿಯೊಳಂದಂ ಚಿತ್ರಿಸುತ್ತಿರ್ದುದೆಂದುಂ॥ ೨೫ ॥

ಆ ಪಂಚವಟಿಯಿಲ್ಲೇ ತೋರುವುದು. ಅಂದು ನಾವಿಲ್ಲಿ ಬಹುಕಾಲ ವಾಸಮಾಡುತ್ತಿದ್ದುದರಿಂದ ಇದು ನಮ್ಮ ವಿಲಾಸಾತಿಶಯಗಳಿಗೆ ಸಾಕ್ಷಿಗಳಾಗಿದ್ದ ಬಗೆಬಗೆಯ ದೃಶ್ಯಗಳಿಂದ ಒಪ್ಪುತ್ತಿದ್ದುದಲ್ಲದೆ, ನನ್ನ ಪ್ರೇಯಸಿಗೆ ಪ್ರಿಯಸಖಿಯಾದ ವಾಸಂತಿಯೆಂಬ ವನದೇವತೆಗೆ ವಾಸಸ್ಥಾನವು. ಇಲ್ಲಿಯ ಸವಿನೆನಪುಗಳು ಒಂದೊಂದಾಗಿ ನನ್ನ ಸ್ಮೃತಿಪಥದಲ್ಲಿ ಒಡಮೂಡುತ್ತಿರುವುವು. ಆಹಾ! ರಾಮನಿಗೀಗ ಸಂಭವಿಸಿದ ಅವಸ್ಥೆಯೇನು—

— ಮತ್ತೇಭವಿಕ್ರೀಡಿತ —

ಒಡಲಂ ಸೇರ್ದ ವಿಷಂ ನಿದಾನದೊಳಿರುತ್ತುಂ ಕಾಲದಿಂ ವ್ಯಾಪಿಪಂ
ತಿಡಿದಿರ್ದಾಶುಗಶಲ್ಯಮಾಹತಮದೇ ತೀವ್ರಂ ಚಲಿಪ್ಪಂದದಿಂ ।

ಒಡವೂಡಿರ್ದಪ ಬೊಕ್ಕೆಗಳ್ಮರುಗಿಪನ್ನಂ ಮರ್ಗುಗಂಡಂ ವಿಳಿ
ರ್ದೊಡೆವಂದಂ ಜನಕಾತ್ಮಜಾವಿರಹದುಃಖಂ ನವ್ಯಮಾಬಾಧಿಕಂ ॥ ೨೬ ॥
ಆದರೂ ನಾನು ಪೂರ್ವಪರಿಚಿತಗಳಾದ ಈ ಭೂಭಾಗಗಳನ್ನೆಲ್ಲಾ ಬಿಡದೆ
ನೋಡುವೆನು (ಎಂದು ಸರಿಯಾಗಿ ನೋಡಿ) ಆಹಾ! ಇದೇನು? ಇಲ್ಲಿ ಸ್ಥಾವರ
ಗಳೂ ಕೂಡ ತಮ್ಮ ನಿಯತಸ್ಥಾನಗಳನ್ನು ಬಿಟ್ಟಂತೆ ತೋರುತ್ತಿವೆಯಲ್ಲ—

— ಚಂಪಕಮಾಲೆ —

ನದಿಗಳ ಸ್ರೋತಮೆಲ್ಲಿ ಮೊದಲಿರ್ದುದೊ ತಾಂ ಮಣಲೊಟ್ಟಿಲಲ್ಲಿ ತೋ
ರ್ಪುದು ತರುವೃಂದವಿರ್ದೆಡೆಯುದೇ ವಿರಲಂಬಡೆದಿಲ್ಲಿ ತೋರುತುಂ ।
ಬದಲೆನೆ ಚಿತ್ರಕಪ್ಪೊಡನುರಣ್ಯಮೆ ಕಾಲದೆ ವೀಕ್ಷಿಸಲ್ಕಿದೇಂ
ಮೊದಲ ಶಿಲೋಚ್ಚಯಂಗಳವೆ ಸಾಕ್ಷ್ಯದೊಳಾ ವನಮೆಂದು ಸೂಚಿಕಂ
॥ ೨೭ ॥

ಇಂತಹ ಪಂಚವಟಿಯನ್ನು ಬಿಟ್ಟು ನಾನೀಗ ಮುಂದೆ ಸಾಗುತ್ತಿದ್ದರೂ
ಕೂಡ, ಅದು ನನ್ನನ್ನು ಸ್ನೇಹದ ಮೂಲಕ ತನ್ನ ಕಡೆಗೆ ಸೆಳೆಯುತ್ತಿರು
ವಂತೆ ಭಾಸವಾಗುವುದು (ಎಂದು ಶೋಕದೊಡನೆ) ಓವೋ ರಾಮಾ!

— ಮತ್ತೇಭವಿಕ್ರೀಡಿತ॥ —

ನಿನಗಾ ಧಾತ್ರಿಜೆಯೊಂದಿಗೆಲ್ಲಿ ಮನೆಯಲ್ಲೆಂತಂತು ಹೃದ್ಯಂಗಳಿಂ
ವನಸಂಬಂಧಕಥಾವಿನೋದಗಳಿನಾ ಕಾಲಂಗಳೋಡಿರ್ದುವೋ ।
ವನದೊಳ್ಳಲ್ಲೆಯನಂತು ನೂಂಕಿದ ಮಹಾಪಾಪಾತ್ಮನೋಳ್ಪಂದಮೇಂ
ಮನಕಾಹ್ಲಾದಕಮಪ್ಪ ಪಂಚವಟಿಯಂ ನೀಂ ನೋಡದೇ ಪೋಪುದೇಂ
॥ ೨೮ ॥

**ಶಂಬೂಕ** — (ಪ್ರವೇಶಿಸಿ) ಸ್ವಾಮಿಗೆ ಜಯವಾಗಲಿ! ಜಯವಾಗಲಿ!
ಈ ದಂಡಕಾರಣ್ಯಕ್ಕೆ ಸ್ವಾಮಿಯ ಪುನರಾಗಮನವಾಗಿರುವುದನ್ನು ನನ್ನಿಂದ
ತಿಳಿದ ಅಗಸ್ತ್ಯಮಹರ್ಷಿಗಳು ನನ್ನೊಡನೆ ಹೀಗೆ ಸಂದೇಶಿಸಿರುವರು—
“ರಾಮನೇ, ನೀನು ನಮ್ಮ ನಿವಾಸದ ಸಮೀಪಕ್ಕೆ ಬಂದಿರುವ ಸಂಗತಿ
ಯನ್ನು ತಿಳಿದು ವತ್ಸಲೆಯಾದ ಲೋಪಾಮುದ್ರೆಯು ಮಹರ್ಷಿಗಳೊಂದಿಗೆ
ನಿನ್ನನ್ನು ಸ್ವಾಗತಿಸಲು ಬೇಕಾದ ಸಿದ್ಧತೆಗಳನ್ನು ಮಾಡುತ್ತ ನಿನ್ನ ಬರ

ವನ್ನೇ ನಿರೀಕ್ಷಿಸುತ್ತಿರುವಳು. ಆದುದರಿಂದ ವಿಳಂಬವಿಲ್ಲದೆ ನೀನಿಲ್ಲಿಗೆ ಬಂದು ನಮ್ಮೆಲ್ಲರನ್ನೂ ಸಂತೋಷಪಡಿಸಬೇಕು. ಬಳಿಕ ಶೀಘ್ರಗಾಮಿಯಾದ ಪುಷ್ಪಕದ ಮೂಲಕ ನಿಜರಾಜಧಾನಿಗೆ ವಿಜಯಮಾಡಿ ಅಶ್ವಮೇಧಯಜ್ಞದಲ್ಲಿ ನಿರತನಾಗಿರಬಹುದು" ಎಂದು.

**ರಾಮ**—ಪೂಜ್ಯರಾದ ಅಗಸ್ತ್ಯಮುನಿಗಳ ಅಪ್ಪಣೆಯಂತಾಗಲಿ.

**ಶಂಬೂಕ**—ಹಾಗಾದರೆ ಸ್ವಾಮಿಯು ಪುಷ್ಪಕವನ್ನು ಹೀಗೆ ಪ್ರೇರೇಪಿಸಬೇಕು.

**ರಾಮ**—(ಪುಷ್ಪಕವನ್ನು ನಡೆಯಿಸುತ್ತ) ಭಗವತಿ ಪಂಚವಟಿ, ಅನುಲ್ಲಂಘ್ಯವಾದ ಗುರುಜನರ ಆಜ್ಞೆಯ ಮೂಲಕ ಉಂಟಾಗುವ ರಾಮನ ಅತಿಕ್ರಮವನ್ನು ಸ್ವಲ್ಪ ಸಮಯದ ವರೆಗೆ ಕ್ಷಮಿಸಬೇಕು.

**ಶಂಬೂಕ**—ಒಡೆಯನೇ ಇಲ್ಲಿರುವುದು ಕ್ರೌಂಚಾವತವೆಂಬ ಪರ್ವತವು—

— ಉತ್ಪಲಮಾಲೆ —

ಕುಂಜಕುಟೀರದಂತರದೆ ಪೆರ್ಚುವ ಪೇಚಕರಾವಕಂ ಸದಾ
ಮಂಜುಲಕೀಚಕಧ್ವನಿಗಮುಳ್ಕುವ ವಾಯಸಸಂಕುಲಂಗಳಿಂ ।
ರಂಜಿಪ ಬರ್ಹಿಸಂತತಿಯು ಕೇಕೆಗೆ ಚಂದನವೃಕ್ಷಕೋಟರ
ಕ್ಕಂಜುತೆ ಸಾರ್ವ ಸರ್ಪಕುಲದಿಂ ನೆರೆದೀ ಗಿರಿಯಂ ನಿರೀಕ್ಷಿಸಾ ॥ ೨೯ ॥

ಅಷ್ಟು ಮಾತ್ರವಲ್ಲದೆ, ದಕ್ಷಿಣಾಪಥದ ದೃಶ್ಯಗಳನ್ನು ನೋಡಬೇಕು—

— ಮತ್ತೇಭವಿಕ್ರೀಡಿತ —

ಇದು ಮೇಘಾಶ್ರಿತನೀಲಶೈಲಶಿಖರಪ್ರಾಂತಂಗಳಿಂ ಹೃದ್ಯಮ-
ಲ್ಲದೆ ನೀರ್ದುಂಬಿದ ಕಂದರಂಗಳ ಕಳಧ್ವಾನಂಗಳಿಂದೊಪ್ಪುಗುಂ ।
ಅದು ತಾಂ ಸಂಪ್ರತಿಘಾತದಿಂ ಚಲಿಪ ವೀಚೀಮಾಲೆಯಿಂ ದೃಶ್ಯಮ-
ಲ್ಲದೆ ಗಂಭೀರನಿನಾದದಿಂ ಮೆರಗುಮೀ ಪುಣ್ಯಂ ಸರಿತ್ಸಂಗಮಂ ॥ ೩೦ ॥

(ಎಂದೆಲ್ಲರೂ ಹೊರಟು ಹೋಗುವರು)

**ಇಂತಿದು ಪಂಚವಟೀಪ್ರವೇಶವೆಂಬ**

**ದ್ವಿತೀಯಾಂಕಂ**

---

# — ತೃತೀಯಾಂಕಂ —

(ಬಳಿಕ ಸ್ತ್ರೀವೇಷಧಾರಿಣಿಯರಾದ ನದೀದೇವಿಯರಿಬ್ಬರು ಪ್ರವೇಶಿಸುವರು)

**ತಮಸೆ**— ಗೆಳತಿಯಾದ ಮುರಲೆ, ನೀನು ವಿಶೇಷವಾದ ಸಂಭ್ರಮ ದಿಂದ ಕೂಡಿದವಳಂತೆ ಕಾಣುತ್ತಿರಲು ಕಾರಣವೇನು?

**ಮುರಲೆ**— ಪೂಜ್ಯಳಾದ ತಮಸೆ, ಕೇಳಬೇಕು. ಅಗಸ್ತ್ಯಪತ್ನಿ ಯಾದ ಲೋಪಾಮುದ್ರಾದೇವಿಯು ನದಿಗಳಲ್ಲಿ ಶ್ರೇಷ್ಠವಾದ ಗೋದಾವರಿ ಯೊಡನೆ ಹೇಳುವುದಕ್ಕಾಗಿ ನನ್ನನ್ನು ಕರೆದು ಹೀಗೆಂದಳು— ಎಲೌ ಗೋದಾವರಿಯೆ, ಸೀತಾಪರಿತ್ಯಾಗವಾದಂದಿನಿಂದ ರಾಮನ ವಿರಹ ವೇದನೆಯು—

ಕಂ॥ ಕಡುದುಃಖಮನೊಳಗೊಳಗಿ
ದೊರ್ಡರಿಸುತುಂ ಪೊರಗೆ ತೋರದತಿಗಂಭೀರಂ।
ಸೆಡೆವ ಪುಟಪಾಕದಂದದ
ಪೊಡವೀಶನ ಕರುಣರಸಮುದೆನಿವಿರಿದಿರ್ಕುಂ ॥ ೧ ॥

ಎಂಬುದನ್ನು ನೀನು ತಿಳಿದಿರುವೆಯಷ್ಟೆ! ವಿಶೇಷವಾದ ಪ್ರೀತಿಗೆ ಪಾತ್ರಳಾದ ಸೀತೆಗೆ ಬಹುಕಷ್ಟವು ಸಂಭವಿಸಿದುದನ್ನು ನೆನೆನೆನೆದು ಸಂತಪಿಸುವ ರಾಮಭದ್ರನೀಗ ಪರಿಕ್ಷೀಣನಾಗಿರುವನು. ಅವನನ್ನು ನೋಡಿ ನನ್ನ ಹೃದಯವು ವಿಶೇಷವಾಗಿ ತಲ್ಲಣಿಸುತ್ತಿದೆ. ಶಂಬೂಕನನ್ನು ವಧಿಸುವುದ ಕ್ಕಾಗಿ ಇಲ್ಲಿಗೆ ಬಂದು ಹಿಂತಿರುಗಿ ಹೋಗುತ್ತಿರುವಾಗ ತಾನಿಲ್ಲಿ ಮೊದಲು ಪತ್ನಿಯೊಂದಿಗೆ ಅನುಭವಿಸಿದ ಸ್ವೇಚ್ಛಾವಿಹಾರಗಳಿಗೆ ಸಾಕ್ಷಿಗಳಾಗಿದ್ದ ಪಂಚವಟೀ ವನಪ್ರದೇಶಗಳನ್ನು ನೋಡಬೇಕಾಗಿದೆ. ಪ್ರಕೃತಿ ಗಂಭೀರನಾದರೂ ವಿರಹಾವಸ್ಥೆಯಲ್ಲಿರುವಾಗ ತೋರುವ ದೃಶ್ಯಗಳ ಮೂಲಕ ಶೋಕವು ಹೃದಯವನ್ನು ಬಹುಬೇಗನೆ ಹಿಂಡಿ ಹಿಳಿಯಬಹು ದಾದಕಾರಣ ಆತನಿಗೆ ಅನೇಕವಿಪತ್ತುಗಳು ಬರಲವಕಾಶವಿರುವುದು. ಆದುದರಿಂದ ನೀನು ಏಕಾಗ್ರಚಿತ್ತಳಾಗಿದ್ದುಕೊಂಡು—

— ಚಂಪಕಮಾಲೆ —

ತೆರೆಗಳ ಮಾಲೆಯಿಂ ಜನಿಸುತಂಬುಕಣಂಗಳನೊಂದಿ ಮೆಲ್ಲನೈ-
ತರಲರಳುತ್ತಲಿರ್ಪ ಸರಸೀರುಹರೇಣುಗಳಿಂದೆ ಗಂಧಮಂ।
ಬೆರೆದ ಸಮೀರನಂ ಸುಳಿಯಿಸುತ್ತೆ ಸರಿದ್ವರೆ ನೀನೆ ಮೋಹಮಾ
ವರಿಸಿರೆ ರಾಮಜೀವಕೆ ಸಪರ್ಯೆಯ ಸಲ್ಲಿಸು ತೃಪ್ತಿಯೊಂದುವೊಲ್॥ ೨ ॥

ಎಂಬ ವಿಚಾರವನ್ನು ತಿಳಸುವುದಕ್ಕಾಗಿ ನಾನು ಬೇಗಬೇಗನೆ ಹೋಗು ತ್ತಿರುವೆನು.

**ತಮಸೆ**—ಸ್ನೇಹವಿರುವಲ್ಲಿ ದಾಕ್ಷಿಣ್ಯವಿರುವುದು ಸಹಜವು. ಆದರೆ ಈಗ ರಾಮಭದ್ರನು ಜೀವಿಸುವುದಕ್ಕೆ ಸಂಜೀವನದಂತೆ ಮುಖ್ಯವಾದ ಉಪಾಯವೊಂದು ಬಂದೊದಗಿರುವುದು.

**ಮುರಲೆ**—ಅದೇನೆಂದು ನಾನರಿತಿಲ್ಲವಲ್ಲ!

**ತಮಸೆ**—ಕೇಳಬೇಕು. ಅಣ್ಣನ ಆಜ್ಞೆಯ ಮೇರೆಗೆ ಲಕ್ಷ್ಮಣನು ವಾಲ್ಮೀಕಿತಪೋವನದ ಬಳಿಯಲ್ಲಿರುವ ಅರಣ್ಯದಲ್ಲಿ ಸೀತೆಯನ್ನು ಬಿಟ್ಟು ಹಿಂತಿರುಗುತ್ತಿದ್ದನು. ಆ ಸಮಯದಲ್ಲಿ ಉಂಟಾದ ಪ್ರಸವವೇದನೆಯನ್ನು ಸಹಿಸಲಾರದೆ ಸೀತಾದೇವಿಯು ಹೇಗೋ ಸಂಕಷ್ಟದಿಂದ ಗಂಗೆಗೆ ದುಮುಕಿದಳು. ಆ ಪ್ರವಾಹದಲ್ಲೇ ಅವಳಿಗೆ ಅವಳಿಮಕ್ಕಳು ಜನಿಸಿ ದರು. ಆಗ ಗಂಗಾಭೂದೇವಿಯರಿಬ್ಬರೂ ಪ್ರತ್ಯಕ್ಷರಾಗಿ ಮಕ್ಕಳನ್ನು ಎತ್ತಿಕೊಂಡು ಸೀತೆಯನ್ನು ಸಮಾಧಾನಪಡಿಸುತ್ತ ಪಾತಾಳಲೋಕಕ್ಕೆ ಕರಕೊಂಡು ಹೋದರು. ಸ್ತನ್ಯಪಾನವನ್ನು ತೊರೆದ ಮೇಲೆ ಆ ತರಳ ರನ್ನು ಗಂಗಾದೇವಿಯು ತಾನೇ ಎತ್ತಿಕೊಂಡು ಬಂದು ವಾಲ್ಮೀಕಿಮಹರ್ಷಿ ಗಳಿಗೆ ಸಮರ್ಪಿಸಿದಳು.

**ಮುರಲೆ**—(ಆಶ್ಚರ್ಯದೊಡನೆ)

**ಕಂ॥** ಇಂತಪ್ಪರ ವಿನಿಪಾತಮು
ಮಂತದ್ಭುತಕರಮೆನಲ್ಕೆ ಪಿರಿಯರ ಸಾಹ್ಯಂ।
ಮುಂತಿರೆ! ಪರಮೋನ್ನತಿಯೊಳ
ದೆಂತಿರ್ಕುಮೊ ನೆರವಿಯೆಂದು ತಿಳಿವೊಡಶಕ್ಯಂ ॥ ೩ ॥

ತಮಸೆ—ರಾಮಚಂದ್ರನು ಶಂಬೂಕವಧೆಗಾಗಿ ಜನಸ್ಥಾನವನ್ನು ಪ್ರವೇಶಿಸುವನು ಎಂಬ ವಿಚಾರವನ್ನು ಸರಯೂನದಿಯ ಹೇಳಿಕೆಯಿಂದ ತಿಳಿದುಕೊಂಡು ಲೋಪಾಮುದ್ರಾದೇವಿಯು ವಾತ್ಸಲ್ಯಾತಿಶಯದಿಂದ ರಾಮನ ಪರವಾಗಿ ಪ್ರಮಾದವನ್ನು ಶಂಕಿಸಿದಳಷ್ಟೆ! ಗಂಗಾದೇವಿ ಯಾದರೂ ಅದೇ ಅಭಿಪ್ರಾಯವನ್ನೇ ಮನಸ್ಸಿಗೆ ತಂದುಕೊಂಡು "ಅನಿಷ್ಟ ಪರಿಹಾರಕ್ಕಾಗಿ ದೇವರನ್ನು ಪೂಜಿಸಬೇಕು" ಎಂಬ ವ್ಯಾಜವನ್ನು ಕಲ್ಪಿಸಿ ಕೊಂಡು ಸೀತೆಯನ್ನು ಕರಕೊಂಡು, ಗೋದಾವರೀತೀರಕ್ಕೆ ಹೋಗೆಂದು ನನ್ನನ್ನು ಕಳುಹಿರುವಳು.

ಮುರಲೆ—ಭಗವತಿಯಾದ ಭಾಗೀರಥಿಯು ಸರಿಯಾಗಿಯೇ ಯೋಚಿಸಿರುವಳು. ಅದು ಹೇಗೆಂದರೆ—"ರಾಜಧಾನಿಯಲ್ಲಿರುತ್ತ ಪ್ರಜೆ ಗಳ ಕ್ಷೇಮ ಚಿಂತನೆಯಲ್ಲೇ ಉದ್ಯುಕ್ತನಾಗಿರುವ ರಾಮಚಂದ್ರನಿಗೆ ಚಿತ್ತ ವಿಕ್ಷೇಪಗಳು ನಿತ್ಯಗಳಲ್ಲ. ಆದರೀಗ ಪ್ರಜಾಚಿಂತನೆಯನ್ನು ಬಿಟ್ಟು ಶೋಕಮಾತ್ರಸಹಾಯನಾಗಿ ಪಂಚವಟೀವನಕ್ಕೆ ಪ್ರವೇಶಿಸುವುದು ಬಹು ಅನರ್ಥಕ್ಕೆ ಕಾರಣವು" ಎಂದು ಯೋಚಿಸಿಕೊಂಡೇ ಸೀತಾಸಮೇತಳಾದ ನಿನ್ನನ್ನು ಗೋದಾವರೀತೀರಕ್ಕೆ ಕಳುಹಿರುವಳು. ಆದರೆ ಅಂತಹ ಸ್ಥಿತಿಯಲ್ಲಿ ಸೀತೆಯು ರಾಮನನ್ನು ಸಮಾಧಾನಪಡಿಸುವ ಬಗೆ ಹೇಗೆ?

ತಮಸೆ—ಭಾಗೀರಥಿಯು ಸೀತೆಯನ್ನು ಕರೆದು—"ಮಗಳೇ, ನೀನು ಜನಕರಾಯನ ಯಜ್ಞಭೂಮಿಯಲ್ಲಿ ಜನಿಸಿ ಸೀತೆಯೆಂದು ಪ್ರಸಿದ್ಧಿಪಡೆದವ ಳಲ್ಲವೆ? ಈಗ ಆಯುಷ್ಮಂತರಾದ ಕುಶಲವರಿಗೆ ಹನ್ನೆರಡು ಸಂವತ್ಸರಗಳು ತುಂಬುವ ಕಾರಣ ಈ ಜನ್ಮದಿನದಲ್ಲಿ ದ್ವಾದಶಸಂಖ್ಯೆಯ ಮಂಗಳ ಗ್ರಂಥಿಯು ನೆರವೇರಬೇಕಾಗಿದೆ. ಆದುದರಿಂದ ನೀನು, ನಿನ್ನ ಮೊತ್ತ ಮೊದಲನೆಯ ಮಾವನೂ ಮನು ಮೊದಲಾದ ರಾಜರ್ಷಿಗಳ ವಂಶಕ್ಕೆ ಮೂಲಪುರುಷನೂ ಎನಿಸಿರುವ ಭಗವಾನ್ ಭಾಸ್ಕರನನ್ನು ನಿನ್ನ ಕೈಗಳಿಂ ದಲೇ ಕೊಯ್ದ ಪುಷ್ಪಗಳಿಂದ ಪೂಜಿಸಬೇಕು. ಅದಕ್ಕಾಗಿ ಪಾತಾಳದಿಂದ ಭೂಲೋಕಕ್ಕೆ ಹೋಗಿರುವ ನಿನ್ನನ್ನು ನಮ್ಮ ಪ್ರಭಾವದಿಂದ ವನದೇವತೆ ಗಳೂ ಕಂಡುಕೊಳ್ಳಲಾರರು ಎಂದರೆ ಮರ್ತ್ಯರು ನೋಡಲಾರ

ರಿಂದು ಬೇರೆ ಹೇಳಬೇಕಾಗಿಲ್ಲವಷ್ಟೆ" ಎಂದು ಹೇಳಿದಳು. ಅಷ್ಟು ಮಾತ್ರವಲ್ಲದೆ ನನ್ನನ್ನು ಕರೆದು "ಎಲೌ ತಮಸೆ ವಧುವಾದ ಜಾನಕಿಯು ನಿನ್ನೊಡನೆ ಅವ್ಯಾಜಸ್ನೇಹವುಳ್ಳವಳಾದುದರಿಂದ ಇವಳಿಗೆ ಸಹಾಯಕಳಾಗಿ ನೀನೇ ಹೋಗಬೇಕು" ಎಂದು ಆಜ್ಞಾಪಿಸಿದಳು. ಅದರಂತೆಯೇ ನಾನೀಗ ನಡಕೊಳ್ಳುತ್ತಿರುವೆನು.

**ಮುರಲೆ**—ಈ ವೃತ್ತಾಂತವನ್ನು ನಾನು ಲೋಪಾಮುದ್ರಾದೇವಿಗೆ ತಿಳಿಯಪಡಿಸುವೆನು. ಓಹೋ! ರಾಮಚಂದ್ರನೀಗಲೇ ಇಲ್ಲಿಗೆ ಬಂದನೆಂದು ಊಹಿಸುವೆನು.

**ತಮಸೆ**—ಆದುದರಿಂದಲೇ—

— ಮಹಾಸ್ರಗ್ಧರೆ —

ಪರಿಪಾಂಡುಕ್ಷೀಣಗಂಡಂ ವಿಲುಲಿತಕಬರೀಬಂಧಮಾಸ್ಯಂ ಮನೋಜ್ಞಂ
ಕರಮೊಪ್ಪಲ್ಸೀತೆ ಗೋದಾವರಿಯ ಮಡುವಿನಿಂದೆಳ್ದು ಸಾಕಾಂಕ್ಷೆಯಿಂದಂ।
ವಿರಹೋದ್ರೇಕಂಸುರೂಪಾಂತುದೊಕರುಣೆಯದೇದೇಹಮಾಂತಿರ್ಪುದೆನ್ನ
ಲ್ಪರಿದಪ್ಪಳ್ಕಾನನಾಂತಂ ಗುರಿಯೆನೆ ಕಡುಶೋಕಾಕುಲಸ್ವಾಂತರಂಗಳ್
॥ ೪ ॥

**ಮುರಲೆ**—ಇವಳೇ ಆ ಜಾನಕಿಯಲ್ಲವೆ?

— ಚಂಪಕಮಾಲೆ —

ಚಿವುಟಿದ ಪಲ್ಲವಂಬೊಲುರೆಬಾಡಿರೆ ಪಾಂಡಿಮಸೂಕ್ಷ್ಮಮಾಗಿರಲ್
ತವೆ ಸುಕುಮಾರಮಪ್ಪ ತನುವಂ ಕಡುಶೋಷಿತಮಾದ ಚಿತ್ತಮುಂ।
ಕವಿಯುತೆ ಕೇತಕೀಮುಕುಳಗರ್ಭಮುನಾ ಶರದಾತಪಂಬೊಲೀ
ದಿವಸದ ವಿಪ್ರಯೋಗದ ನಿರಂತರಶೋಕಮೆ ಬತ್ತಿಕುಂ ವಲಂ ॥ ೫ ॥

(ಎಂದು ಹೊರಟು ಹೋಗುವರು)

**ಇಂತಿದು ಶುದ್ಧವಿಷ್ಕಂಭಂ**

(ನೇಪಥ್ಯದಲ್ಲಿ)

ಹಾ ಮಗುವೆ! ಮಗುವೇ!

(ಬಳಿಕ ಹೂಗಳನ್ನು ಕೊಯ್ಯುತ್ತ ಕರುಣಾಕೂತಜನಕವಾದ ಆಕ್ರಂದನೆ ವನ್ನು ಕೇಳುತ್ತಿರುವಂತೆ ಸೀತೆಯು ಪ್ರವೇಶಿಸುವಳು)

ಸೀತೆ—(ಆಶ್ಚರ್ಯದೊಡನೆ) ಇದೇನು! ನನ್ನ ಪ್ರಿಯಸಖಿಯಾದ ವಾಸಂತಿಯು ಕೂಗುವಂತಿದೆಯಲ್ಲ!

(ತಿರುಗಿ ನೇಪಥ್ಯದಲ್ಲಿ)

— ಶಾರ್ದೂಲವಿಕ್ರೀಡಿತ —

ಅಂದಾ ಸೀತೆಯು ಸಲ್ಲಕೀಕಿಸಲಯಂದಾಳ್ದಿರ್ದ ಹಸ್ತಾಗ್ರದಿಂ
ಪಿಂದುಂ ಮುಂದುಮೆನಲ್ಕೆ ಪೋಗಿ ಕಲಭಂ ಮೆಲ್ಲುತ್ತೆ ಬಳ್ದಿರ್ದುದೋ ॥

ಸೀತೆ—ಹೌದು! ಆ ಬಾಲಗಜಕ್ಕೆ ಏನಾಯಿತು?

(ಮತ್ತೂ ನೇಪಥ್ಯದಲ್ಲಿ)

ಅಂದಂಬೆತ್ತ ಕರೇಣುವೊಂದಿಗೆ ಜಲಂಬೊಕ್ಕಾಡುತಿರ್ಪಾ ಗಜಂ
ಮುಂದೈತಂದ ಮದೇಭದಿಂ ಪರಿಭವಂಗೊಂಡಪ್ಪುದೇನೆಂಬೆನೋ ॥ ೬ ॥

ಸೀತೆ— (ಅದನ್ನು ಕೇಳಿ ಸಂಭ್ರಮದೊಡನೆ ಸ್ವಲ್ಪ ಮುಂದೆ ಹೋಗಿ) ಆರ್ಯಪುತ್ರ, ನನ್ನ ಬಾಲಗಜವನ್ನು ಕಾಪಾಡು! ಕಾಪಾಡು! (ಯೋಚಿಸಿ ಕೊಂಡು) ಆಹಾ! ಇದೇನು? ಪಂಚವಟೀದರ್ಶನದಿಂದ ಚಿರಪರಿಚಿತ ಗಳಾದ "ಆರ್ಯಪುತ್ರ" ಎಂಬ ಅಕ್ಷರಗಳೇ ಈ ಮಂದಭಾಗಿನಿಯನ್ನೀಗ ಅನುಸರಿಸುತ್ತಿವೆಯಲ್ಲ! ಹಾ ಆರ್ಯಪುತ್ರಾ! (ಎಂದು ಮೂರ್ಛೆ ಹೊಂದು ವಳು)

ತಮಸೆ—(ಪ್ರವೇಶಿಸಿ) ಮಗಳೇ ಸಮಾಧಾನಹೊಂದು! ಸಮಾ ಧಾನಹೊಂದು! (ಎಂದು ಸಮಾಧಾನಪಡಿಸುವಳು)

(ನೇಪಥ್ಯದಲ್ಲಿ)

ವಿಮಾನರಾಜನೇ ನಿಲ್ಲು! ನಿಲ್ಲು!

ಸೀತೆ— (ಸಮಾಧಾನಹೊಂದಿ ಭಯಸಂಭ್ರಮೋಲ್ಲಾಸಗಳೊಡನೆ) ಓಹೋ ಇದೇನು! ನೀರಿನಿಂದ ತುಂಬಿದ ಮೋಡದ ಮೊಳಗಿನಂತೆ

ಗಂಭೀರವೂ ಪರಿಪೂರ್ಣವೂ ಆಗಿರುವ ವಚನಘೋಷವು ಕರ್ಣಾಮೃತ ವಾಗಿ ನನ್ನ ಚಿತ್ತವನ್ನು ಸೆಳೆಯುತ್ತಿರುವುದು.

ತಮಸೆ—(ಸಂತೋಷಬಾಷ್ಪದೊಡನೆ) ಮಗಳೇ—

— ವಸಂತಮಾಲಿಕೆ —

ಚಪಲಾಗತಿಗಾ ಮಯೂರಿ ಬೇಗಂ
ಸುಪರಿಜ್ಞಾನದ ನಾಟ್ಯಕೆಯ್ದುವಂದಂ ।
ಅಪರಿಸ್ಫುಟನಾದದತ್ತ ಚಿತ್ತಂ
ಚಪಲಂಗೊಂಡಪುದೆಂತು ಯುಕ್ತಮಕ್ಕುಂ ॥ ೭ ॥

ಸೀತೆ— ಪೂಜ್ಯಳೆ, ಘೋಷವದು ಅವ್ಯಕ್ತವೇನು? ಕಾಂತನು ಮಾತಾಡುತ್ತಿರುವನೆಂದು ಸ್ವರಸಂಯೋಗದ ಮೂಲಕ ತಿಳಿಯುವೆನಲ್ಲ!

ತಮಸೆ— ತಪಸ್ಸುಮಾಡುತ್ತಿರುವ ಶೂದ್ರನನ್ನು ದಂಡಿಸುವುದ ಕ್ಕಾಗಿ ಇಕ್ಷ್ವಾಕುವಂಶದ ರಾಜನು ದಂಡಕಾರಣ್ಯದ ಭಾಗವನ್ನು ಸೇರಿರು ವನು ಎಂಬ ವಾರ್ತೆಯು ಪ್ರಚಲಿತವಾಗುತ್ತಿದೆಯಷ್ಟೆ!

ಸೀತೆ— ಆ ಜನಾಧಿಪನು ವಿಧಿಯೋಗದಿಂದ ಸ್ವಧರ್ಮದಲ್ಲಿ ನಿರತ ನಾಗಿರುವನಲ್ಲ !

(ನೇಪಥ್ಯದಲ್ಲಿ)

— ಮತ್ತೇಭವಿಕ್ರೀಡಿತ —

ಚಿರಕಾಲಂ ಪ್ರಿಯೆಯೊಂದಿಗಾವೆಡೆಯೊಳೆನ್ನಾವಾಸಮುಂದಿರ್ದುದೋ
ತರುವೃಂದಂ ಮಿಗವಿಂಡುಮೆನ್ನೊಡನೆ ಬಂಧುಸ್ನೇಹಮಂ ತೋರ್ದುವೋ।
ನಿರುಕಿಪ್ಪಂತೆಯೆ ತೋಷಿಸುತ್ತೆ ಪರಿವಾ ಗೋದಾವರೀತೀರದೊಳ್
ಮೆರೆಗುಂ ಕಂದರನಿರ್ಝರಾವೃತಗಿರಿಪ್ರಾಂತಂಗಳೆಂತಂತವೇ ॥ ೮ ॥

ಸೀತೆ—ಆಹಾ! ಪ್ರಾತಃಕಾಲದ ಚಂದ್ರಮಂಡಲದಂತೆ ಕಳೆಗುಂದಿ ಪರಿಕ್ಷೀಣವಾದ ಆಕೃತಿಯುಳ್ಳವನಾದರೂ ಸ್ವಾಭಾವಿಕವಾದ ಸೌಮ್ಯ ಗಾಂಭೀರ್ಯಗಳು ತೋರಿ ಬರುವುದರಿಂದ ಇವನು ಆರ್ಯಪುತ್ರನೆಂಬು ದರಲ್ಲಿ ಸಂಶಯವಿಲ್ಲ. ಪೂಜ್ಯಳೆ, ನನ್ನನ್ನು ಅವಲಂಬಿಸಿಕೊಳ್ಳಬೇಕು. (ಎಂದು ಹೇಳುತ್ತ ತಮಸೆಯಿಂದ ಅವಲಂಬಿತೆಯಾಗಿ ಮೂರ್ಛೆಹೊಂದುವಳು.)

ತಮಸೆ— ಮಗಳೆ, ಸಮಾಧಾನತಂದುಕೊ! ಸಮಾಧಾನ ತಂದುಕೊ!

(ನೇಪಥ್ಯದಲ್ಲಿ)

ಈ ಪಂಚವಟೀದರ್ಶನದಿಂದ—

ಕಂ॥ ಒಳಗಣ ಶೋಕಾಗ್ನಿಯೆ ಪ-
ಜ್ವಳಿಸುತೆ ದಳ್ಳುರಿಯುಲಿರ್ಪುದಂ ಸೂಚಿಸುತಂ ।
ಬಳವದ್ಧೂಮದ ತೆರದಿಂ
ಸುಳಿದೆಳೆಗುಂ ಮೋಹಮೆನ್ನ ಚಿತ್ತಮನಕಟಾ! ॥ ೯ ॥

ಆಹಾ! ನಲ್ಲೇ ಜಾನಕಿ!

ತಮಸೆ—(ಸ್ವಗತಂ) ಇದನ್ನಲ್ಲವೆ ಗುರುಜನವು ಮುಂದಾಗಿ ತಿಳಿಕೊಂಡುದು.

ಸೀತೆ—(ಎಚ್ಚರಗೊಂಡು) ಆಹಾ ಕಷ್ಟವೇ! ಇದೇನು ಹೀಗೆ?

(ಪುನಃ ನೇಪಥ್ಯದಲ್ಲಿ)

ಹಾ ದೇವಿ! ದಂಡಕಾರಣ್ಯದಲ್ಲಿ ಪ್ರಿಯಸಖಿಯಾಗಿದ್ದವಳೆ! ವಿದೇಹರಾಜತನೂಜೆ! (ಎನ್ನುತ್ತ ಮೂರ್ಛೆಹೊಂದುವನು)

ಸೀತೆ—ಅಕಟಕಟಾ! ಅದೃಷ್ಟಹೀನೆಯಾದ ನನ್ನನ್ನೇ ಸ್ಮರಿಸಿಕೊಳ್ಳುತ್ತ ನೇತ್ರೋತ್ಪಲಗಳನ್ನು ಮುಚ್ಚಿಕೊಂಡು ಮೂರ್ಛೆಹೊಂದಿದನೇ! ಉಸಿರಾಟವಿಲ್ಲದೆ ಅಸ್ತವ್ಯಸ್ತವಾಗಿ ನೆಲದಲ್ಲಿ ಬಿದ್ದುಹೋದನೆ? ಕಷ್ಟವೇ! ಈಗ ನಾನೇನು ಮಾಡಲಿ? ಪೂಜ್ಯಳಾದ ತಮಸೆ, ಆರ್ಯಪುತ್ರನನ್ನು ಬದುಕಿಸು! ಬದುಕಿಸು!

(ಎಂದು ಹೇಳುತ್ತ ಪಾದಗಳಲ್ಲಿ ಕೆಡೆಯುವಳು)

ತಮಸೆ—ಮಗಳೆ, ಆ ಕಾರ್ಯವು ನಿನ್ನಿಂದಲೇ ಆಗಬೇಕು!

ಕಂ॥ ಧರಣಿಜೆ ಮೋಹಾವೃತನಂ
ಪುರುಷೋತ್ತಮನಂ ಬರ್ದುಂಕಿಪುದು ನಿನ್ನ ಕರಂ ।
ವರಸಂಜೀವನಮಿದರೊಳ್
ನಿರತನಿವಂ ಮಂಗಳಾಂಗಿ ಕಾರ್ಯಮನರಿಯೌ ॥ ೧೦ ॥

ಸೀತೆ—ಅದೇನೇ ಇರಲಿ! ಪೂಜ್ಯಳ ಅಪ್ಪಣೆಯನ್ನು ನೆರವೇರಿಸುವೆನು. (ಎಂದು ಹೇಳುತ್ತ ಸಂಭ್ರಮದಿಂದ ಹೊರಟುಹೋಗುವಳು)

(ಬಳಿಕ ಕಂಬನಿಗರೆಯುತ್ತಿರುವ ಸೀತೆಯ ಕರಸ್ಪರ್ಶದಿಂದ ಉಂಟಾದ ಆನಂದೋಚ್ಛ್ವಾಸಗಳುಳ್ಳ ರಾಮನು ನೆಲದಲ್ಲಿ ಮಲಗಿರುವಂತೆ ಪ್ರವೇಶಿಸುವನು.)

ಸೀತೆ—(ಸ್ವಲ್ಪಸಮಾಧಾನದೊಂದಿಗೆ) ತ್ರಿಭುವನದ ಜೀವವು ಮರಳಿ ಬಂದಂತೆ ತಿಳಿದುಕೊಳ್ಳುವೆನು.

ರಾಮ—ಆಹಾ! ಇದೇನು?

— ಚಂಪಕಮಾಲೆ —

ಸುರಿದಪುದೇಂ ಮನಕ್ಕೆ ಹರಿಚಂದನಪಲ್ಲವಸಾರಮೋ ಕರಂ
ಪರಿವೃದಿತೇಂದುರೋಚಿಲಸದಂಕುರಸೇಕಮೊ ಯೋಚಿಸಲ್ಕಹೋ।
ಚೊರೆದಪುದೇಂ ಪ್ರತಪ್ತಮೆನಿಪೆನ್ನಯ ಜೀವಕೆ ದಿವ್ಯತರ್ಪಣಂ
ನೆರೆದೆರ್ದೆಯೊಳ್ಪಳಂಚಿದ ಸುಧಾರಸಪೂರಮೊ ಯೋಚಿಸಲ್ಕಿದೇಂ?
॥ ೧೧ ॥

ಅಷ್ಟುಮಾತ್ರವಲ್ಲದೆ,

— ಮತ್ತೇಭವಿಕ್ರೀಡಿತ —

ವ್ಯಸನಂದಾಳ್ದಿರೆ ಬಂದ ಮೋಹಮನೆ ನೂಂಕುತ್ತುಂ ಮನಕ್ಕಿಂತು ಸಂ-
ತಸಮುಂ ತೋರ್ದು ಬಳಿಕ್ಕೆ ತಾನೆ ಜಡಭಾವಂದಾಳ್ದಿದೊಂದಂದಮೇಂ?।
ನಿಸದಂ ಯೋಚನೆಯೇಕೆ ಮಾನಸಕಿದೇ ಸಂಜೀವನಂ ಮತ್ತೆ ತಾ-
ಮಸದಂತಿರ್ಪ ವಿಮೋಹನಂ ಭವಿಸಲಿಂತಾ ಪೂರ್ವಸಂಸ್ಪರ್ಶಮೇ
॥ ೧೨ ॥

ಸೀತೆ—(ಭಯಕಂಪಗಳೊಡನೆ ಹಿಂದಕ್ಕೆ ಸರಿದು) ಆರ್ಯಪುತ್ರನಿಗೆ ಅಷ್ಟಾದರೂ ಸ್ಮರಣೆಯಿದೆಯಲ್ಲ! ಇಂತಹ ನನಗೆ ಅದೇ ಹೆಚ್ಚಿನದು.

ರಾಮ—(ಮೆಲ್ಲಗೆ ಎದ್ದು ಕುಳಿತುಕೊಂಡು) ನಾನು ವಾತ್ಸಲ್ಯವತಿಯಾದ ದೇವಿಯಿಂದ ಅನುಗೃಹೀತನಾಗಲಿಲ್ಲವಲ್ಲ!

ಸೀತೆ—ಕಷ್ಟವೇ! ಆರ್ಯಪುತ್ರನು ನನ್ನನ್ನು ಹುಡುಕುವನೇನು?

ರಾಮ—ಆಗಲಿ, ನೋಡುವೆನು.

ಸೀತೆ—ಪೂಜ್ಯಳಾದ ತಮಸೆ, ನಾವಿಲ್ಲಿಂದ ಹೋಗಿಬಿಡೋಣ! ಪರಿತ್ಯಾಜಿತೆಯಾಗಿ ಅನುಮತಿಯಿಲ್ಲದೆ ಸಮೀಪಿಸಿದ ನನ್ನ ಅಕ್ರಮಕ್ಕಾಗಿ ರಾಜನು ವಿಶೇಷವಾಗಿ ಕೋಪಿಸಿಕೊಳ್ಳುವನು.

ತಮಸೆ—ಮಗಳೆ, ಭಯಪಡಬೇಡ! ಗಂಗಾದೇವಿಯ ಅನುಗ್ರಹದಿಂದ ನೀನು ವನದೇವತೆಗಳಿಗೂ ಅದೃಶ್ಯಳಾಗಿರುವೆ!

ಸೀತೆ—ಹೌದು! ಭಗವತಿಯಾದ ಭಾಗೀರಥಿಯ ಅನುಗ್ರಹವು ನನ್ನಲ್ಲಿರುವುದು.

ರಾಮ—(ಮೋಹಾವೇಶದೊಡನೆ) ಹಾ! ಪ್ರಿಯೇ ಜಾನಕಿ !

ಸೀತೆ—(ಭಯದಿಂದ ನಡುಗುವ ಸ್ವರದೊಡನೆ) ಆರ್ಯಪುತ್ರ, ಪರಿತ್ಯಕ್ತೆಯಾದ ನನ್ನನ್ನೂ ಹೀಗೆ ಕರೆಯುತ್ತಿರುವುದು ಸರಿಯಲ್ಲವಷ್ಟೆ! (ಎನ್ನುತ್ತ ಕಂಬನಿಗೂಡಿ) ಅಥವಾ ನಾನು ಹೀಗೆ ಹೇಳುತ್ತಿರುವುದು ಸರಿಯಲ್ಲ. ಜನ್ಮಾಂತರಗಳಲ್ಲಿ ದುರ್ಲಭವಾದ ದರ್ಶನವುಳ್ಳವನಾದರೂ ನಿರ್ಭಾಗ್ಯವತಿಯಾದ ನನ್ನನ್ನು ಕುರಿತು "ಪ್ರಿಯೇ" ಎಂದು ಸಂಬೋಧಿಸುತ್ತಿರುವ ಆರ್ಯಪುತ್ರನಲ್ಲಿವಾಗ್ವಜ್ರವನ್ನು ಪ್ರಯೋಗಿಸಬಹುದೆ? ನಾನು ಸ್ವಾಮಿಯ ಹೃದಯವನ್ನು ತಿಳಿಯದವಳೇನು? ಹಾಗೆಯೇ ಇವನು ನನ್ನನ್ನೂ ತಿಳಿಯದವನಲ್ಲ.

ರಾಮ— (ಸುತ್ತಲೂ ನೋಡಿ ಸಂತಾಪದೊಡನೆ) ಆಹಾ! ಸರ್ವಶೂನ್ಯವು !

ಸೀತೆ—ಪೂಜ್ಯಳಾದ ತಮಸೆ, ನಿಷ್ಕಾರಣವಾಗಿ ನನ್ನನ್ನು ಪರಿತ್ಯಾಗ ಮಾಡಿದರೂ ಈತನನ್ನು ನೋಡುತ್ತಿರುವಾಗ ನನ್ನ ಹೃದಯದ ಸ್ಥಿತಿಯನ್ನು ನಾನೇ ತಿಳಿಯದಿರುವೆನು.

ತಮಸೆ—ಮಗಳೆ, ನಿನ್ನ ಹೃದಯದ ಅವಸ್ಥೆಯನ್ನು ನಾನು ಸರಿಯಾಗಿ ಬಲ್ಲೆನು—

— ಉತ್ಪಲಮಾಲೆ —

ನಿನ್ನ ಮನಂ ನಿರಾಶೆಗೊಳಗಾಗಿ ತಟಸ್ಥಮಿರಲ್ಕುವಾಸದಿಂ
ಕೆನ್ನಮನಚ್ಛವಾಗಿರಲದೇ ಅನಿರೀಕ್ಷಿತವಾದ ನೋಟದಿಂ ।

ಬಿನ್ನನೆ ಸ್ತಬ್ಧವಾಗಲಿವನೇ ಸುಜನಂಗಡ ಎಂದು ತುಷ್ಟಿಗೊಂ
ಡುನ್ನತನಲ್ಲಿ ನಿಂದ ನಲವಿಂ ಕರುಣಾತ್ಮಕವಾಗಿ ಚಿಮ್ಮುಗುಂ ॥ ೧೩ ॥

ರಾಮ—ಆಹಾ! ಇದೇನು?

ಕಂ॥ ಅಂದದ ಕಾಯಮನಾಂತ್ಮೆ
ತಂದೊಲ್ಮೆಯು ತೆರದೆ ಸ್ನಿಗ್ಧಶೀತಲವಾಗಲ್ ।
ಪೊಂದಿದ ನಿನ್ನ ಸ್ಪರ್ಶದೆ
ಕುಂದದೆ ತೋಷಿಪ್ಪೆನೇಕೆ ತೋರಿಯೊ ನಲ್ಲೇ ॥ ೧೪ ॥

ಸೀತೆ— ಆರ್ಯಪುತ್ರನ ಈ ಆರ್ತಾಲಾಪಗಳು ಅತಿಗಂಭೀರವಾದ ಹೃದಯದಿಂದ ಸುವ್ಯಕ್ತಗಳಾಗಿ ಸ್ನೇಹಪೂರ್ಣಗಳಾಗಿ ಆನಂದಕರಗಳಾಗಿ ಅಮೃತಮಯಗಳಾಗಿ ಹೊರಡುತ್ತಿವೆಯಲ್ಲ! ನಿಷ್ಕಾರಣವಾದ ಪರಿತ್ಯಾಗದಿಂದ ಹೃದಯಶಲ್ಯವುಳ್ಳದ್ದಾದರೂ ನನ್ನ ಜನ್ಮಲಾಭವು ಇಂತಹ ಮಾತುಗಳಲ್ಲಿರುವ ನಂಬಿಕೆಯಿಂದ ಪ್ರಿಯವಾಗಿರುವುದು.

ರಾಮ—ಅಥವಾ ನನ್ನ ಪ್ರಿಯತಮೆಯಾದ ಸೀತೆಯು ಎಲ್ಲಿರುವಳು? ನನ್ನ ಚಿತ್ತವಾದರೂ ಅವಳ ವಿಯೋಗದಿಂದುಂಟಾದ ಸಂಕಲ್ಪದ ಮೂಲಕ ಅವಳಿಲ್ಲಿಗೆ ಬಂದಂತೆಯೂ ಸ್ಪರ್ಶವಾದಂತೆಯೂ ಭಾವಿಸುತ್ತಿರುವುದು. ಇದು ರಾಮನ ಭ್ರಾಂತಿಯೇ ಹೊರತು ಮತ್ತೊಂದಲ್ಲ!

(ನೇಪಥ್ಯದಲ್ಲಿ)

ಆಹಾ! ಪ್ರಮಾದವು! ಅತಿಪ್ರಮಾದವು!

("ಅಂದಾಸೀತೆಯು" ಎಂಬ ಪದ್ಯಾರ್ಧವು ಕೇಳಿಸುವುದು)

ರಾಮ— (ಶೋಕಕುತೂಹಲಗಳೊಡನೆ) ಹೌದು! ಆ ಬಾಲಗಜಕ್ಕೆ ಏನಾಯಿತು?

(ಪುನಃ ನೇಪಥ್ಯದಲ್ಲಿ)

("ಅಂದಂಚಿತ್ತ" ಎಂಬ ಉತ್ತರಾರ್ಧವು ಕೇಳಿಸುವುದು)

ಸೀತೆ—ಅದರೊಂದಿಗೆ ಹೋರಾಡುತ್ತಿರುವವರಾರು?

ರಾಮ—ಪ್ರಿಯೆಯೊಂದಿಗೆ ವಿಹರಿಸುತ್ತಿರುವ ಸೀತೆಯ ಬಾಲಗಜವನ್ನು ಸೋಲಿಸುತ್ತಿರುವ ಧೂರ್ತನೆಲ್ಲಿರುವನು? ಎಲ್ಲಿರುವನು? (ಎಂದು ಹೇಳುತ್ತ ಮೇಲಕ್ಕೆ ಏಳುವನು)

ವಾಸಂತಿ—(ಸಂಭ್ರಾಂತಳಾಗಿ ಪ್ರವೇಶಿಸಿ) ಆಹಾ! ಶ್ರೀರಾಮದೇವನು ಪ್ರತ್ಯಕ್ಷವಾಗಿರುವನು.

ಸೀತೆ—ಓಹೋ! ಪ್ರಿಯಸಖಿಯಾದ ವಾಸಂತಿಯು ಬಂದಿರುವಳು.

ವಾಸಂತಿ—(ರಾಮನ ಸಮೀಪಕ್ಕೆಹೋಗಿ) ಮಹಾಸ್ವಾಮಿಗೆ ಜಯವಾಗಲಿ! ಜಯವಾಗಲಿ!

ರಾಮ—(ನೋಡಿ) ದೇವಿಯ ಗೆಳತಿಯಾದ ವಾಸಂತಿಯೋ ಬಂದಿರುವಳು.

ವಾಸಂತಿ—ಸ್ವಾಮಿಯು ತ್ವರೆಮಾಡಬೇಕು! ತ್ವರೆಮಾಡಬೇಕು! ಇಲ್ಲಿಗೆ ಸಮೀಪವಾಗಿ ಜಟಾಯುಶಿಖರದ ದಕ್ಷಿಣಭಾಗದಲ್ಲಿರುವ ಸೀತಾಘಟ್ಟದಿಂದ ಇಳಿದು ಗೋದಾವರೀಜಲದಲ್ಲಿ ವಿಹರಿಸುತ್ತಿರುವ ಸೀತೆಯ ಬಾಲಗಜವನ್ನು ಸ್ವಾಮಿಯು ನೋಡಬೇಕು!

ಸೀತೆ—ಅಕಟಾ! ತಂದೆಯಾದ ಜಟಾಯುವೇ, ನೀನಿಲ್ಲದೆ ಜನಸ್ಥಾನವು ಶೂನ್ಯವಾಗಿರುವುದು.

ರಾಮ—ಆಹಾ ಸಂಕಷ್ಟವೇ! ಆ ಹಿಂದಣ ಕತೆಗಳು ಹೃದಯಮರ್ಮಚ್ಛೇದಿಗಳು.

ವಾಸಂತಿ—ಸ್ವಾಮಿಯು ಹೀಗೆ ಬರಬೇಕು. (ಎಂದು ಗೋದಾವರೀತೀರದ ದಾರಿಯನ್ನು ತೋರಿಸುವಳು)

ಸೀತೆ—ಪೂಜ್ಯಳೆ, ಗಂಗಾದೇವಿಯ ವಚನವು ನಿಜವಾದುದು. ವನದೇವತೆಯಾದ ವಾಸಂತಿಯೂ ನನ್ನನ್ನು ನೋಡುವುದಿಲ್ಲ.

ತಮಸೆ—ಮಗಳೆ, ಸಮಸ್ತದೇವತೆಗಳಲ್ಲಿಯೂ ಗಂಗಾದೇವಿಯ ಪ್ರಭಾವವು ಉತ್ಕೃಷ್ಟವಾದುದು. ಈ ವಿಷಯದಲ್ಲಿ ನೀನು ಸಂದೇಹಪಡಬೇಕಾಗಿಲ್ಲ.

ಸೀತೆ—ಹಾಗಾದರೆ ನಾವು ಅನುಸರಿಸಿ ಹೋಗಬಹುದಲ್ಲ?

(ಹಾಗೆಯೇ ಅವರಿಬ್ಬರೂ ಅನುಸರಿಸಿ ಹೋಗುವರು)

ರಾಮ—ಭಗವತಿ ಭಾಗೀರಥಿ, ವಂದಿಸಿಕೊಳ್ಳುವೆನು.

**ವಾಸಂತಿ**—(ಸರಿಯಾಗಿ ನೋಡಿ) ಸ್ವಾಮಿಯೆ, ಕರೇಣುವೊಂದಿಗಿರುವ ಬಾಲಗಜವು ವೈರಿಯೊಡನೆ ಹೋರಾಡಿ ವಿಜಯಿಯಾಗಿರುವುದರಿಂದ ಸಂತೋಷಪಡುವವನಾಗು.

**ರಾಮ**—(ನೋಡುತ್ತ) ಚಿರಂಜೀವಿಗೆ ಉತ್ತರೋತ್ತರವಾಗಲಿ! (ಎಂದು ಆಶೀರ್ವದಿಸುವನು)

**ಸೀತೆ**—ಆಹಾ! ಆ ನನ್ನ ಗಜಪೋತವೀಗ ಯೌವನಶಾಲಿಯಾಗಿರುವುದು.

**ರಾಮ**—ದೇವಿ, ಭಾಗ್ಯವಿಶೇಷದಿಂದ ನೀನು ವರ್ಧಿಸುತ್ತಿರುವೆ-

ಮಾಲಿನಿ ॥ ಬಿಸಕಿಸಲಯದಂತೊಪ್ಪಲ್ಕೆ ದಂತಾಂಕುರಂ ನಿ-
ನ್ನೆಸೆವ ಕಿವಿಯಿನೀಳ್ದ ಪಲ್ಲವಂಮೆಲ್ಲ ಬಾಲಂ ।
ಪೊಸವಗೆಯ ಬಲಂಗೊಂಡೆಳ್ದ ಮದ್ದಾನೆಯುಂ ಗೆ-
ಲ್ಲಸಮನೆನಿಸಿ ಭದ್ರಂಗಳ್ಗೆ ತಾಂ ಭಾಗಿಯಪ್ಪಂ ॥ ೧೫ ॥

**ಸೀತೆ**—ಈ ಗಜವು ಸರ್ವಲಕ್ಷಣಲಕ್ಷಿತೆಯಾದ ಕರೇಣುವೊಂದಿಗೆ ಸೇರಿ ವಿಯೋಗದ ಬೇನೆಯನ್ನು ಅರಿಯದೇನೇ ಚಿರಂಜೀವಿಯಾಗಿ ಬಾಳುತ್ತಿರಲಿ!

**ರಾಮ**—ಗೆಳತಿಯಾದ ವಾಸಂತಿಯೆ, ನೋಡಬೇಕು. ಈ ಬಾಲಗಜವೀಗ ತನ್ನ ಪ್ರೀತಿಗೆ ಒಳಗಾಗಿರುವ ಹೆಣ್ಣಾನೆಯನ್ನು ಅನುಸರಿಸುವುದರಲ್ಲೂ ಸರಿಯಾಗಿ ಪಳಗಿರುವುದು. ಹೇಗೆಂದರೆ—

— ಮತ್ತೇಭವಿಕ್ರೀಡಿತ —

ಮುದದಿಂ ಹಸ್ತದೆ ಪದ್ಮಕಾಂಡತತಿಯಂ ತಂದಿತ್ತದಂ ಮೊಲ್ದೊಡಂ
ಸದಯಂ ನೀರ್ಗುಡಿಯೆಂದು ಬಾಯ್ಗೆರೆಯುತುಂ ಕಾಂತಾನುರಕ್ತಂ ಗಜಂ।
ಅದೊ ಫೂತ್ಕಾರದೊಳಲ್ಲಿ ಶೀಕರಗಳಿಂದಂ ಸೇಕಮಂ ಗೆಯ್ಯುತುಂ
ಪದಪಿಂ ಸಾರಸಪತ್ರಮೆತ್ತಿ ಪಿಡಿಯುತ್ತುಂ ತಾಪಮಂ ಬಾರಿಕುಂ ॥ ೧೬ ॥

**ಸೀತೆ**—ಪೂಜ್ಯಳಾದ ತಮಸೆ, ಪಲ್ಲಮರಿಯಿದು ವರ್ಧಿಸುತ್ತ ಯೌವನಶಾಲಿಯಾಗಿರುವುದು. ಆದರೆ, ತರಳರಾದ ಕುಶಲವರು ಈಗ ಹೇಗೆ ವರ್ಧಿಸುತ್ತಿರಬಹುದು ಎಂಬ ವಿಚಾರವನ್ನು ನಾನಿನ್ನೂ ತಿಳಿದಿಲ್ಲವಲ್ಲ!

**ತಮಸೆ**— ಇದರಂತೆಯೇ ಅವರೂ ಇರಬಹುದು.

**ಸೀತೆ**— ಪತಿವಿರಹ ಮಾತ್ರವಲ್ಲದೆ, ಪುತ್ರವಿಯೋಗವನ್ನೂ ಪಡೆದಿರುವೆನಾದ ಕಾರಣ ನನ್ನಂತಹ ಅದೃಷ್ಟಹೀನೆಯರು ಬೇರೆ ಯಾರೂ ಇರಲಾರರು.

**ತಮಸೆ**— ವಿಧಿಯೇ ಹೀಗಿರಲು ನಾವು ಮರುಗುವುದರಿಂದ ಪ್ರಯೋಜನವಿಲ್ಲ.

**ಸೀತೆ**— ವಿರಳವಾಗಿ ಮೂಡಿ ತೋರುತ್ತಿದ್ದ ದಂತಕುಡ್ಮಲಗಳ ಶುಭ್ರಕಾಂತಿಗಳಿಂದಲೂ, ಮಿಗಿಲಾಗಿ ಉಕ್ಕಿ ಬರುತ್ತಿದ್ದ ನಗುಗಳೊಂದಿಗೆ ಕೇಳಿಸುತ್ತಿದ್ದ ತೊದಲುಲಿಗಳಿಂದಲೂ ಕಂಗೊಳಿಸುತ್ತಿದ್ದ ಮುಗ್ಧಮುಖಪುಂಡರೀಕಗಳನ್ನು ಮುದ್ದಿಸುತ್ತ ಸ್ವಾಮಿಯು ಪರಮಾನಂದತುಂದಿಲಾಂತರಂಗನಾಗಲಿಲ್ಲವೆಂದರೆ, ನಾನು ಅಂತಹ ತರಳರನ್ನು ಪಡೆದು ಪ್ರಯೋಜನವೇನು?

**ತಮಸೆ**—ಮಗಳೆ, ನಿನ್ನ ಅಭೀಷ್ಟವು ದೇವತಾನುಗ್ರಹದಿಂದ ನೆರವೇರಲಿ!

**ಸೀತೆ**— ಪೂಜ್ಯಳೆ, ಪತಿಸನ್ನಿಧಿಯಲ್ಲಿರುತ್ತ ಪುತ್ರಸ್ಮರಣೆಯುಂಟಾಗಿ ಸ್ತನಗಳು ತುಂಬಿಕೊಂಡು ಕ್ಷೀರವನ್ನು ಸುರಿಸುತ್ತಿರುವುದರಿಂದ ನಾನೀಗ ಕ್ಷಣಕಾಲ ಸಂಸಾರಿಣಿಯಾಗಿರುವೆನು.

**ತಮಸೆ**— ಆ ವಿಷಯದಲ್ಲಿ ನೀನು ಹೇಳುವುದೇನು? ದಂಪತಿಗಳ ಪರಸ್ಪರಸ್ನೇಹವೃದ್ಧಿಗೆ ಪುತ್ರೋತ್ಪತ್ತಿಯೇ ಮೇರೆಯು. ಆದುದರಿಂದಲೇ-

**ಕಂ॥** ತಿರೆಯೊಳ್ದಂಪತಿಗಳ ಬಗೆ
ಪರಮೈಕ್ಯಂಗೊಂಡಿರಲ್ಕೆ ಹೇತುವೆನುತ್ತುಂ।
ಮೆರೆದಪ್ಪುದಪತ್ಯಮದೇ
ವರಹರ್ಷಗ್ರಂಥಿಯೆಂದು ಪೇಳಲ್ಪಡುಗುಂ ॥ ೧೭ ॥

**ವಾಸಂತಿ**— ಸ್ವಾಮಿಯು ಇತ್ತ ನೋಡಬೇಕು—

— ಮತ್ತೇಭವಿಕ್ರೀಡಿತ —

ಪದುಳಂ ಪ್ರೋದ್ಗತವಾದ ಬರ್ಹಮೆನಸುಂ ಲೋಲಂ ವಿರಾಜಿಕ್ಕುವಾಂ
ಮುದವೊಂದಲ್ಕಿದೆ ಹೇತುವೆಂದು ನಲವಿಂ ನಿನ್ನಾಕೆ ಸಾಕಿರ್ದಳೋ ? ।
ಅದೆ ತಾಂ ರತ್ನಕಿರೀಟದಂತೆ ಶಿಖೆ ತೋರಲ್ಕೇಕಿ ಕಾಂತಾಯುತಂ
ಮದಿಸುತ್ತಿಲ್ಲಿ ಕದಂಬದೊಳ್ಕುಳಿತುಕೊಂಡೋರಂದದಿಂ ಕೇಗುಗುಂ ॥೧೮॥

ಸೀತೆ—(ಸ್ನೇಹಾಕೂತಗಳೊಡನೆ ಕಂಬನಿದುಂಬಿ) ಅದೇ ಮಯೂರ ವಿದು.

ರಾಮ—ವತ್ಸ ಮಯೂರ, ಕಾಂತೆಯೊಡನಾಡಿಯಾಗಿ ಸುಖಿಸು ತ್ತಿರು! ಇದೇ ನಮಗೆ ಸಂತೋಷದಾಯಕವು.

ಸೀತೆ—ಬಾಲಕ, ಇದೇ ರೀತಿ ಸುಖವಾಗಿ ಬಾಳು!

ರಾಮ— — ಚಂಪಕಮಾಲೆ —

ತಿರುಗುವ ತಾರಕಾಯುಗಳದಂತೆಯೆ ನರ್ತಿಸೆ ಭ್ರೂಯುಗಂಗಳುಂ
ಧರಣಿಜೆ ಪಾಡಿ ಪಾಡಿ ಕರತಾಡನದೊಂದಿಗೆ ನಿನ್ನನಾವಗಂ ।
ನೆರೆ ಕುಣಿದಾಡಿಸುತ್ತಿರೆ ಮನೋಹರವಾದ ನಿನತ್ತು ನೃತ್ಯಮಂ
ನಿರುಕಿಸಿದಂದಮಂ ನೆನೆವೆನಿಂದಿನ ದರ್ಶನದಿಂದೆ ಬಾಲಕಾ! ॥ ೧೯ ॥

ಆಹಾ! ಆಶ್ಚರ್ಯವೇ! ತಿರ್ಯಗ್ಜಂತುಗಳಾದರೂ ಚಿರಕಾಲಸಂದರ್ಶನ ದಲ್ಲಿರುವ ತಮ್ಮ ಪ್ರೀತಿಯನ್ನು ಅನುಸರಿಸುತ್ತಿವೆಯಲ್ಲ!

— ಚಂಪಕಮಾಲೆ —

ಕಿರಿದು ದಿನಂಗಳಿಂದೆ ಬೆಳೆಸಿರ್ದ ಕದಂಬಮದಾವುದಾಗಳೇ
ವಿರಳತೆಯಿಂದೆ ಪುಷ್ಪಿಸಿರೆ ನೋಡಿ ಧರಾತ್ಮಜೆ ತುಷ್ಟಿಗೊಂಡಳೋ? ।

ಸೀತೆ—(ಕಂಬನಿಯೊಡನೆ) ಆರ್ಯಪುತ್ರನ ಸ್ಮರಣೆಯು ಸರಿಯಾಗಿ ರುವುದು.

ರಾಮ—

ಗಿರಿವನದಲ್ಲಿ ಜೀವಿಪ ಮಯೂರನುಮಿಂತುಟು ಮಾತೃಭಕ್ತಿಯಂ
ಸ್ಮರಿಸುತೆಬಂಧುಭಾವದೊಳದೇಮರನೇರ್ದತಿಮೋದಮೊಂದುಗುಂ ॥೨೦॥

**ವಾಸಂತಿ**—ಸ್ವಾಮಿಯು ಇಲ್ಲಿರುವ ಆಸನವನ್ನು ಪರಿಗ್ರಹಿಸ ಬೇಕು.

**ರಾಮ**—ಹಾಗೆಯೇ ಆಗಲಿ! (ಎಂದು ಕುಳಿತುಕೊಳ್ಳುವನು)

**ವಾಸಂತಿ**— — ಮತ್ತೇಭವಿಕ್ರೀಡಿತ —

ಪದುಳಂ ವಾಸಿಸುತಂದು ನಲ್ಲೆಯೊಡನಾಡುತ್ತೆಲ್ಲಿ ನೀನಿರ್ದೆಯೋ
ಕದಳೀಷಂಡದ ಮಧ್ಯದಲ್ಲಿ ಮೆರೆವೀ ಕಲ್ಮಂಚಮಂ ವೀಕ್ಷಿಸಾ ।
ಮುದದಿಂ ಜಾನಕಿ ಪುಲ್ಗಳಂ ಪಿಡಿಯುತುಂ ಕೂಗುತ್ತೆ ನಿಂದಿರ್ದೊಡೀ
ಪದದೊಳ್ಪುಲ್ಲೆಗಳೋಡಿಬಂದುಕವಿದಿರ್ದೊಂದಂದಮುಂಭಾವಿಸಾ? ॥೨೧॥

**ರಾಮ**—ನಾನಿದನ್ನು ಹೇಗೆ ನೋಡಲಿ? (ಎಂದು ದುಃಖಿಸುತ್ತ ಬೇರೆ ಕಡೆಗಾಗಿ ನೋಡುತ್ತಿರುವನು)

**ಸೀತೆ**—ಸಖಿ ವಾಸಂತಿ, ಆರ್ಯಪುತ್ರನಿಗೆ ಈ ಸ್ಥಳವನ್ನು ತೋರಿಸುತ್ತ ನೀನು ಮಾಡಿರುವುದೇನು? ಕಷ್ಟವೇ! ಅಂದು ಮನಬಂದಂತೆ ಸುಖವನ್ನನುಭವಿಸುತ್ತ ಮೆರೆದಿದ್ದವನಲ್ಲವೆ? ಅಂದಿನ ಪಂಚವಟೀವನವು ಇಂದೂ ತೋರುತ್ತಿರುವುದು. ಹಿಂದೆ ಪ್ರಿಯಸಖಿಯಾಗಿದ್ದ ವಾಸಂತಿಯು ಇಂದೂ ಇಲ್ಲಿರುವಳು. ಅಂದಿನ ಬಗೆಬಗೆಯ ವಿಲಾಸಾನುಭವಗಳಿಗೆ ಸಾಕ್ಷಿಗಳಾಗಿದ್ದ ಗೋದಾವರೀತೀರದ ವನಪ್ರದೇಶಗಳು ಇಂದೂ ಗೋಚರಿಸುತ್ತಲಿವೆ. ಅಂದು ಪುತ್ರವಾತ್ಸಲ್ಯದಿಂದ ವರ್ಧಿತಗಳಾದ ಮೃಗಪಕ್ಷಿತರುಲತಾದಿಗಳೇ ಇಂದಿಗೂ ತೋರುವುವು. ಆದರೇನು? ಎಲ್ಲವೂ ಇದ್ದರೂ ಅದೃಷ್ಟವಿಲ್ಲದ ನನ್ನ ಪಾಲಿಗೆ ಇಲ್ಲದಂತೆಯೇ ಸರಿ! ಇದಲ್ಲವೇ ಮರ್ತ್ಯಲೋಕದ ಪರಿಣಾಮವು?

**ವಾಸಂತಿ**—ಗೆಳತಿ ಸೀತೆ, ನೀನು ರಾಮನ ಅವಸ್ಥೆಯನ್ನು ಕಾಣಲಾರೆಯಾ?

ಮಾಲಿನಿ॥ ನವಕುವಲಯಮುಗ್ಧಾಂಗಂಗಳಿಂದೊಪ್ಪುತಿರ್ದಂ
ನವನವತೆಯಿನೆಂದುಂ ಚಿತ್ತಮಂ ತೋಷಿಸಿರ್ದಂ ।
ಅವನಿಪತಿ ವಿಯುಕ್ತಂ ಕಂದಿ ಕುಂದಿರ್ಪೊಡಂ ಮು–
ತ್ತವನೆನುತೆ ವಿಭಾವ್ಯಂ ತೋರ್ಪೊಡಂ ಕಣ್ಗೆ ರಮ್ಯಂ ॥೨೨॥

**ಸೀತೆ**—ಪ್ರಿಯಸಖಿ, ನೋಡುತ್ತಲೇ ಇರುವೆನಲ್ಲಾ!

**ತಮಸೆ**—ನಿನ್ನ ಪ್ರಿಯನನ್ನು ನೋಡುತ್ತ ಸಂತೋಷಪಡುವವಳಾಗು.

**ಸೀತೆ**—ಹಾ ವಿಧಿಯೇ! ನಾನಿಲ್ಲದೆ ಇವನೂ, ಇವನಿಲ್ಲದೆ ನಾನೂ, ಹೀಗೆ ಒಬ್ಬರನ್ನೊಬ್ಬರು ಅಗಲಿ ಇರಬೇಕೆಂಬ ಈ ವಿಯೋಗವನ್ನು ಮನಸ್ಸಿನಲ್ಲಾದರೂ ಕಲ್ಪಿಸಿದವರಾರು? ಜನ್ಮಾಂತರವನ್ನು ಪಡೆದಿರುವೆನೆಂಬ ಹಾಗೆ ಅನಿರೀಕ್ಷಿತವಾಗಿ ದೊರೆತ ಸ್ನೇಹಪೂರ್ಣನಾಗಿರುವ ಆರ್ಯಪುತ್ರನನ್ನು ಕಂಬನಿಯು ಸೋರಿ ಹೋಗಿ ಮತ್ತೂ ತುಂಬುತ್ತಿರುವುದರೊಳಗಿರುವ ಕ್ಷಣಕಾಲದಲ್ಲೇ ನೋಡಿಕೊಳ್ಳುವೆನು. (ಎಂದು ಹಾಗೆಯೇ ನೋಡುತ್ತಿರುವಳು.)

**ತಮಸೆ**—(ಆಲಿಂಗಿಸಿಕೊಂಡು ಕಂಬನಿದುಂಬಿ) ನಚ್ಚಿನ ಗೆಳತಿ,

— ಮತ್ತೇಭವಿಕ್ರೀಡಿತ —

ಮುದಶೋಕಂ ಕತವಾಗೆ ಚಿಮ್ಮಿ ಸುರಿಯುತ್ತಿರ್ಪ್ಪ ಶ್ರುಪೂರಂಗಳಿಂ
ದಿದು ಲೋಲಂ ಸರಲಂ ಸ್ವಭಾವಮಧುರಂ ನಿಮ್ನೋನ್ನತಂ ತಾಂ ಸದಾ ।
ಹ್ರದಮೆಂದೊಪ್ಪುವ ನಿನ್ನ ನೇತ್ರಯುಗಳಂ ಚಿತ್ತೇಶನಂ ಸ್ನೇಹಪೂ-
ರದಿನೀಗಳ್ಸುಖವಾಗೆ ಮಿಯಿಸಿ ಕರಂ ಪೂಜಿಕ್ಕೆ ವಿಶ್ವಾಸದಿಂ ॥ ೨೩ ॥

**ವಾಸಂತಿ**— — ಮತ್ತೇಭವಿಕ್ರೀಡಿತ —

ಬರುತಿರ್ಪಂ ರಘುರಾಮಚಂದ್ರನಿದೊ ಮತ್ತಂ ಕಾನನಾಂತಕ್ಕೆನ
ಲ್ತಿರುವೃಂದಂ ಮಧುಬಿಂದುಪುಷ್ಪಫಲಸಮ್ಮಿಶ್ರಾರ್ಘ್ಯವೀಗುಂ ಗಡಾ ।
ಬಿರಿಯುತ್ತಿರ್ಪ ಸರೋಜಗಂಧದೊಡನೀ ವನ್ಯಾನಿಲಂ ಬೀಸುಗುಂ
ಭರದಿಂದಂ ಶ್ರುತಿಗೂಡಿ ಪಕ್ಷಿನಿವಹಂ ತಾಂ ಮಂದ್ರಮಂ ಪಾಡುಗುಂ
॥ ೨೪ ॥

**ರಾಮ**—ಸಖಿಯಾದ ವಾಸಂತಿಯೇ, ಮುಂದಿರುವ ಶಿಲಾತಲದಲ್ಲಿ ಬಂದು ಕುಳಿತುಕೊಳ್ಳಬಹುದಲ್ಲ!

**ವಾಸಂತಿ**—(ಹಾಗೆಯೇ ಕುಳಿತುಕೊಂಡು ಕಂಬನಿಸುರಿಸುತ್ತ) ಮಹಾರಾಜನೆ, ಕುಮಾರಲಕ್ಷ್ಮಣನಿಗೆ ಕುಶಲವೇನು?

**ರಾಮ**—(ಕೇಳದವನಂತೆ ನಟಿಸುತ್ತ)

— ಮತ್ತೇಭವಿಕ್ರೀಡಿತ —

ಜಲನೀವಾರತೃಣಂಗಳಿತ್ತು ನಲವಿಂದಂ ಜಾನಕೀದೇವಿಯಿಾ
ಸ್ಥಲದೊಳ್ಪೋಷಿಸಿ ವರ್ಧಿಸಿರ್ಪ ತರುಪಕ್ಷ್ಯೇಣಂಗಳಂ ನೋಡಲೀ ।
ಬಲಿತಿರ್ಪೆನ್ನೆದೆಯುಂ ವಿಕಾರಕೊಳಗಾಗುತ್ತುಂ ದ್ರವಂಗೊಂಡಿದೋ
ಚಲಿಸುತ್ತುಂ ತೊರೆಯಾಗಿ ಪಾಯ್ವ ಜಲದಂದಂ ಪಾಯ್ವುದಿನ್ನೆತ್ತಲೋ
॥ ೨೫ ॥

**ವಾಸಂತಿ**—ಮಹಾರಾಜನೆ, ನಾನು ಕುಮಾರಲಕ್ಷ್ಮಣನ ಕುಶಲವನ್ನು ಕೇಳುತ್ತಿರುವೆನು.

**ರಾಮ**—(ಸ್ವಗತಂ) ಇದೇನು! ಈ ವನದೇವತೆಯು ಸ್ನೇಹವಿಲ್ಲದಂತೆ "ಮಹಾರಾಜನೆ" ಎಂದು ಸಂಬೋಧಿಸುತ್ತಿರುವಳಲ್ಲ! ಲಕ್ಷ್ಮಣನ ವಿಷಯದಲ್ಲಿ ಮಾತ್ರವೇ ಬಾಷ್ಪಗದ್ಗದವಾದ ಕುಶಲಪ್ರಶ್ನೆಯನ್ನು ಮಾಡುತ್ತಿರುವಳು. ಆದುದರಿಂದ ಇವಳು ಸೀತಾವೃತ್ತಾಂತವನ್ನು ತಿಳಿದಿರಬಹುದು. (ಪ್ರಕಾಶಂ) ಹೌದು! ಕುಮಾರಲಕ್ಷ್ಮಣನು ಕುಶಲಿಯೇ ಸರಿ.

**ವಾಸಂತಿ**—(ದುಃಖಿಸುತ್ತ) ಅರಸನೇ, ನೀನು ಬಹುಕಠಿನಚಿತ್ತನಾಗಿರುವೆಯಲ್ಲ?

**ಸೀತೆ**—ಗೆಳತಿಯಾದ ವಾಸಂತಿಯೆ, ನೀನು ಹೀಗೆ ನಿಷ್ಠುರವಾಗಿ ಮಾತಾಡಬಹುದೆ? ಆರ್ಯಪುತ್ರನು ಸಕಲಜನರ ಪ್ರೀತಿಗೂ ಪಾತ್ರನು. ಹಾಗಿರಲು ನನ್ನ ಗೆಳತಿಯಾದ ನಿನಗೆ ಪೂಜಾರ್ಹನೆಂದು ಬೇರೆ ಹೇಳಬೇಕಾಗಿದೆಯೇನು?

**ವಾಸಂತಿ**— — ಶಾರ್ದೂಲವಿಕ್ರೀಡಿತ —

ನೀನೇ ಜಾನಕಿಯೆನ್ನ ಬಾಳ್ವೆಯೆನತಿನ್ನೊಂದಿರ್ಪ ಚಿತ್ತಂ ಗಡಾ
ನೀನೇ ಚಂದ್ರಿಕೆಯೆನ್ನಲೋಚನಕೆ ಮತ್ತಾ ದಿವ್ಯಪೀಯೂಷಮುಂ ।
ನೀನೇಯೆನ್ನೊಡಲ್ಗೆಂದು ಪೇಳ್ದು ಹಿತಮಾಗಿಪ್ಪಂದದಿಂ ಮುಗ್ಧೆಯಂ
ನೀನೇ ನಂಬಿಸಿ ಶಾಂತಮಂತವಳನೇ! ಪೇಳ್ವಂದಮಿನ್ನಂದಮೋ?
॥ ೨೬ ॥

(ಎಂದು ಹೇಳುತ್ತ ಮೂರ್ಛೆಹೊಂದುವಳು)

**ತಮಸೆ**—ವಾಕ್ಯವಿರಾಮವೂ ಮೋಹಾಗಮವೂ ಸರಿಯಾಗಿರುವುದು.

**ರಾಮ**—ಗೆಳತಿ, ಸಮಾಧಾನಹೊಂದು! ಸಮಾಧಾನಹೊಂದು!

**ವಾಸಂತಿ**—(ಮೆಲ್ಲಗೆ ಚೇತರಿಸುತ್ತ) ಸ್ವಾಮಿಯು ಇಂತಹ ಅಕಾರ್ಯವನ್ನು ಮಾಡಲು ಕಾರಣವೇನು?

**ಸೀತೆ**—ಸಖಿಯಾದ ವಾಸಂತಿಯೇ ನಿಲ್ಲಿಸು! ನಿಲ್ಲಿಸು! ಮುಂದೆ ಇಂತಹ ಮಾತುಗಳನ್ನಾಡಬೇಡ!

**ರಾಮ**—ಲೋಕವು ಸಹಿಸುವುದಿಲ್ಲವೆಂದು.

**ವಾಸಂತಿ**—ಹಾಗೆ ಸಹಿಸದಿರಲು ಕಾರಣವೇನು?

**ರಾಮ**—ಕಾರಣವನ್ನು ಲೋಕವು ಅದರಷ್ಟಕ್ಕೇ ಏನೋ ತಿಳಿದುಕೊಂಡಿದೆ.

**ತಮಸೆ**—ಬಹು ಕಾಲದಿಂದ ಬಂದ ಅಪವಾದವು.

**ವಾಸಂತಿ**—

**ಕಂ॥** ಧರೆಯೊಳ್ಕೀರ್ತಿಪ್ರಿಯ! ನಿ-
ಷ್ಠುರತೆಯ ಫಲದಿಂದೆ ನಿನಗೆ ಸಮನಿಸಿತಯಶಂ।
ತೊರೆದಿರೆ ಹರಿಣಾಕ್ಷಿಗೆ ಭೀ-
ಕರವನದೊಳ್ಬವಿಸಿದಂದಮಂ ಬಗೆದಿರ್ಪಾ? ॥ ೨೭ ॥

**ಸೀತೆ**—ಪ್ರಿಯಸಖಿಯಾದ ವಾಸಂತಿಯೇ, ದುಃಖಭಾಗಿಯಾಗಿರುವ ಆರ್ಯಪುತ್ರನನ್ನು ಮತ್ತಷ್ಟು ಮರುಗಿಸುವೆಯಾದ ಕಾರಣ ನೀನು ಕಠಿನ ಚಿತ್ತದ ಭಯಂಕರಸ್ವಭಾವದವಳಾಗಿರುವೆ.

**ತಮಸೆ**—ಮಗಳೆ, ನಿನ್ನ ಮೇಲಿರುವ ವಿಶೇಷವಾದ ಪ್ರೀತಿಯಿಂದ ಉಂಟಾಗಿರುವ ಶೋಕದ ಮೂಲಕವೇ ವಾಸಂತಿಯು ಹೀಗೆ ಹೇಳುತ್ತಿರುವಳಲ್ಲದೆ, ನಿಜವಾಗಿಯೂ ಅವಳ ಹೃದಯವು ನಿಷ್ಠುರವಾಗಿಲ್ಲ.

**ರಾಮ**—ಗೆಳತಿ, ಆ ವಿಷಯದಲ್ಲಿ ತಿಳಕೊಳ್ಳತಕ್ಕದ್ದೇನಿರುವುದು—

— ಮತ್ತೇಭವಿಕ್ರೀಡಿತ —

ಬೆದರ್ದಾ ಬಾಲಮೃಗಂಬೊಲಾಕೆ ವಿಪಿನಾಂತಂ ಪ್ರಾಪ್ತಮಾಯ್ತೆಂದು ಗ-
ದ್ಗದಿಸುತ್ತುಮ್ಮಳಿಸಲ್ಕೆ ಬಳ್ದ ಬಸುರಿಂದಂ ಕಷ್ಟಮಂ ಪೊಂದುತುಂ ।
ಬಿದಿಯಿಂತಾದುದೆಯೆಂದು ಗೋಳಿಡುತಿರಲ್ಕನ್ನಂಗಿಯಂಗಾಂಗಮಂ
ಮುದಿಸಿರ್ದಸ್ರಪಸಂಕುಲಂ ಬಗಿದು ತಿಂದಿರ್ಕುಂಗಡಾ ಪೇಳ್ವುದೇಂ
॥ ೨೮ ॥

ಸೀತೆ— ಆರ್ಯಪುತ್ರನೆ, ನಾನಿನ್ನೂ ಬದುಕಿರುವೆನಲ್ಲ!

ರಾಮ— ಹಾ! ಪ್ರಿಯೇ ಜಾನಕಿ, ನೀನೆಲ್ಲಿರುವೆ?

ಸೀತೆ— ಹಾ ಕಷ್ಟವೇ! ಆರ್ಯಪುತ್ರನು ಮುಕ್ತಕಂಠನಾಗಿ ಗೋ
ಳಾಡುತ್ತಿರುವನಲ್ಲ!

ತಮಸೆ— ಮಗಳೆ, ಇದೀಗ ಸರಿಯಾಗಿರುವುದು. ವ್ಯಸನಪೀಡಿತ
ರಾದವರು ಹೇಗಾದರೂ ಅದರ ಉಪಶಮನವನ್ನು ಮಾಡಿಕೊಳ್ಳಬೇಕು—

ಕಂ॥ ನೀರೊತ್ತರಿಸಿರೆ ಕಟ್ಟದ
ನೀರಂ ಪೋಗೊಳಿಸಿ ಕಟ್ಟಮಂ ಕಾಪಿಡರೇ? ।
ಏರಿದ ಶೋಕಂ ಮನಮಂ
ವಿಾರಲ್ದುಃಖಿಪ್ಪುದರಕದೇ ಪ್ರತಿಕಾರಂ ॥ ೨೯ ॥

ಪ್ರಪಂಚವೇ ಕಷ್ಟಮಯವು; ಅದರಲ್ಲೂ ರಾಮಭದ್ರನಿಗೆ ಸಂಕಷ್ಟಮಯ
ವಾದುದು—

— ಮಹಾಸ್ರಗ್ಧರೆ॥ —

ಅದೆ ಪತ್ನೀಶೋಕಘರ್ಮಂ ಹೃದಯಕುಸುಮಮಂ ಸತ್ವರಂ ಬಾಡಿಸುತ್ತಿ
ರ್ಪುದು ಪತ್ನೀತ್ಯಾಗಮಂ ಗೆಯ್ದವನನಿತು ಜನಂ ನೋಡೆ
ಶೋಕಿಪ್ಪುದಿಲ್ಲಂ ।
ಸದಯಂ ಧರ್ಮಕ್ಕೆ ಕುಂದಿಲ್ಲದ ತೆರನೊಳೆ ಸಾಮ್ರಾಜ್ಯಮಂ ಗೆಯ್ಯೆವೇಳ್ಕುಂ
ಬಿದಿಯಿಂದಿತ್ತಣ್ಗೆವಂದುಮ್ಮಳಿಪನನಿತರಿಂ ಚಿತ್ತಮುಂ ಶಾಂತಮಕ್ಕುಂ
॥ ೩೦ ॥

ಆದುದರಿಂದ ಹೀಗೆ ಶೋಕಿಸುವುದು ಲಾಭಕರವೇ ಸರಿ.

**ರಾಮ**—ಆಹಾ ಕಷ್ಟವೇ!

— ಶಾರ್ದೂಲವಿಕ್ರೀಡಿತ —

ಚಿತ್ತಂ ಸ್ಫೋಟಿಸುನಾಂಪುದೀ ವಿರಹದಿಂದಿಬ್ಭಾಗಮಿಂದಾಗದೈ
ಮತ್ತಂ ಮೂರ್ಛೆಯುನಾಂಪುದಲ್ಲದೊಡಲೀ ಚೈತನ್ಯಮಂ ನೀಗದೈ ।
ಪೊತ್ತಿಕ್ಕುಂ ತನುವಂ ವಿಯೋಗದನಲಂ ತಾಂ ಭಸ್ಮಮಂ ಗೆಯ್ಯದೈ
ಮತ್ತಂ ಮರ್ಮವಿದಾರಿಯಾ ಬಿದಿಯೆನತ್ತೀ ಬಾಳ್ವೆಯಂ ತುಂಡಿಸಂ ॥ ೩೧ ॥

**ಸೀತೆ**—ಸ್ಥಿತಿಯು ಹಾಗೆಯೇ ಸರಿ.

**ರಾಮ**—ಓವೋ! ಅಯೋಧ್ಯಾಪುರವಾಸಿಗಳೇ, ದೇಶದ ಜೀವಾಳ ವೆನಿಸುವ ಪ್ರಜೆಗಳೇ ನಿಮ್ಮೆಲ್ಲರನ್ನೂ ಬೇಡಿಕೊಳ್ಳುವೆನು—

— ಚಂಪಕಮಾಲೆ —

ಅರಮನೆಯಲ್ಲಿ ದೇವಿಯಿರವೊಪ್ಪದು ಮತ್ಪ್ರಜೆಗಳ್ಗೆಯೆಂಬುದಂ
ಚರನರುಪಲ್ಕೆ ಶೂನ್ಯವನದೊಳ್ತೃಣದಂತೆ ಬಿಡುತ್ತಲತ್ತೆನೇ? ।
ಚಿರಸಹವಾಸದಿಂ ಪರಿಚಿತಂಗಳಿವೆಲ್ಲಮುಮೆನ್ನ ಚಿತ್ತಮಂ
ಕರಗಿಪುವಿಂತು ಸತ್ವರದೆ ಶೋಕಿಸೆ ಕೋಪಿಸಲಾಗದೆಂಬೆನಾಂ ॥ ೩೨ ॥

**ವಾಸಂತಿ**—(ಸ್ವಗತಂ) ಕೋಪದ ಆವಿಷ್ಕರಣವು ಬಹುಗಂಭೀರ ವಾಗಿರುವುದು (ಪ್ರಕಾಶಂ) ಸ್ವಾಮಿಯೆ, ಕಳೆದು ಹೋದ ವಿಷಯದಲ್ಲಿ ಧೈರ್ಯವನ್ನು ಅವಲಂಬಿಸಬೇಕು.

ರಾಮ—ಏನು! ಧೈರ್ಯಸ್ಥನಾಗಿರಬೇಕೆಂದು ಹೇಳುವೆಯೊ?

ತಾಮರಸಂ॥ ಧರಣಿಜೆಯಿಲ್ಲದೆ ಪನ್ನೆರಡಬ್ದಂ
ನೆರೆದುದು ಲೋಕದೆ ಕಂಡವರಿಲ್ಲಾ ।
ಸರಿದವೊಲಾಪೆಸರುಂ ಸ್ಮೃತಿಯಿಂದಂ
ಬಿರಿಯದು ರಾಮನ ನಿಷ್ಠುರಚಿತ್ತಂ ॥ ೩೩ ॥

ಸೀತೆ—ಆರ್ಯಪುತ್ರನ ಇಂತಹ ಮಾತುಗಳಿಂದ ಮೋಹಗೊಳ್ಳು ತ್ತಿರುವೆನಲ್ಲ!

**ತಮಸೆ**—ನೀನು ಸರಿಯಾಗಿಯೇ ಹೇಳಿರುವೆ—

— ಮತ್ತೇಭವಿಕ್ರೀಡಿತ —

ತರಳೀ ಮಾತುಗಳಿಂತಿವೇ ಪ್ರಿಯಕರಂಗಳ್ಪ್ರೀತಿಯುಕ್ತಂಗಳೆಂ
ದರಿವಾ! ದುಃಖವಿನಿರ್ಗತಂಗಳವು ಘೋರಾಂತಂಗಳೀ ನಿನ್ನೊಳಂ।
ಪರಮಾನಂದಮನುಂಟುಮಾಳ್ಪ ಮಕರಂದಾಸಾರಮಾಗಿರ್ದೊಡಂ
ಗರಲಂ ಸೇರ್ದತಿಭೀಕರಾಂತಮದರಿಂದೇನಾಗದೇ ಪೋಕುಮೇಂ ॥ ೩೪ ॥

ರಾಮ— ಅಷ್ಟುಮಾತ್ರವಲ್ಲದೆಯೂ—

**ಕಂ॥** ಕುತ್ತಿರ್ದುಗಲ್ಮುಕಶಲ್ಯಂ
ಮತ್ತಲ್ಲೀ ವಿಷದದಂಶಮಾದಂತೆನ್ನೀ ।
ಚಿತ್ತಮನೆಂತುಂ ಬಿಡದೆಯೆ
ಕತ್ತರಿಪಾ ದುಃಖಶಂಕುವಂ ಸಹಿಸೆನೆ ಪೇಳ್ ॥ ೩೫ ॥

ಸೀತೆ— ಪೂಜ್ಯಳೆ, ಮಂದಭಾಗಿನಿಯಾದ ನನ್ನ ಸಲುವಾಗಿ ಆರ್ಯ ಪುತ್ರನು ನಿರಂತರವಾದ ಸಂತಾಪಕ್ಕೆ ಗುರಿಯಾದನಲ್ಲ!

ರಾಮ— ವಾಸಂತಿಯೆ, ಇಂತಹ ವ್ಯಸನದಿಂದ ಉತ್ಸಾಹಭಂಗ ವಾಗಿ ನನ್ನ ಅಂತಃಕರಣವು ಸ್ತಬ್ಧವಾಗಿರುವುದು. ಆದರೂ ಪೂರ್ವ ಪರಿಚಿತಗಳಾದ ತರು, ಪಕ್ಷಿ, ಮೃಗ ಮೊದಲಾದುವುಗಳನ್ನು ನೋಡು ತ್ತಿರುವಂತೆಯೇ ಮುಂದೊತ್ತಿ ಬರುವ ದುಃಖದ ಆವೇಗವನ್ನು ಏನೆಂದು ಹೇಳಲಿ?

— ಮಹಾ ಸ್ರಗ್ಧರೆ —

ದಡಮಂ ಮೀರಲ್ಪ್ರಕೋಪಂಬಡೆದ ಕರುಣೆಯಂ ಸ್ತಂಭನಂಗೆಯ್ವೆನೆಂದೇ
ಬಿಡದಾಂ ಯತ್ನಂಗಳಂ ಮಾಳ್ಪನಿತರೊಳನಿತಂ ಭಂಗಿಸುತ್ತದ್ಭುತಂ ತಾಂ।
ಸೆಡೆವೀ ಚೇತೋವಿಕಾರಂ ಪರಿಕಿಸೆ ಸಿಕತಾಬಂಧಮಂ ವೇಗದಿಂ ದೂ-
ಡಿಡುವಾ ಕೂಲಂಕಷೌಘಂಬೊಲೆ ಪರಿಗುಮನಿರ್ಬಂಧದಿಂದಂ ಗಭೀರಂ
॥ ೩೬ ॥

ಸೀತೆ— ಅನಿರ್ಬಂಧವಾಗಿ ಮುಂದುವರಿಯುತ್ತಿರುವ ಆರ್ಯ ಪುತ್ರನ ದುಃಖಾವೇಗವು ನನ್ನ ಸಂತಾಪವನ್ನು ಪರಿಹರಿಸುತ್ತಿರುವಂತೆಯೇ ದುರ್ಬಲವಾದ ನನ್ನ ಚಿತ್ತವು ತತ್ತರಿಸುತ್ತಿರುವುದು.

**ವಾಸಂತಿ**— (ಸ್ವಗತಂ) ಸ್ವಾಮಿಯು ಬಹಳವಾಗಿ ದುಃಖಿಸುತ್ತಿರುವನು. ಆದುದರಿಂದ ಬೇರೆ ವಿಷಯವಾಗಿ ಪ್ರಸ್ತಾಪಿಸುತ್ತ ಈತನ ದುಃಖದ ಭರವನ್ನು ಕಡಿಮೆಮಾಡುವೆನು. (ಪ್ರಕಾಶಂ) ಈಗ ಸ್ವಾಮಿಯು ಚಿರಪರಿಚಿತಗಳಾದ ಜನಸ್ಥಾನದ ಪ್ರದೇಶಗಳನ್ನು ನೋಡಿ ಸಂಭಾವಿಸಬೇಕು.

**ರಾಮ**— ಹಾಗೆಯೇ ಆಗಲಿ! (ಹಾಗೆಯೇ ಅವರಿಬ್ಬರೂ ಎದ್ದು ಸಂಚರಿಸ ತೊಡಗುವರು).

**ಸೀತೆ**— ಪ್ರಿಯಸಖಿಯಾದ ವಾಸಂತಿಯು ಸ್ವಾಮಿಯ ದುಃಖವನ್ನು ಪರಿಹರಿಸುವೆನೆಂದು ಮಾಡುತ್ತಿರುವ ಉಪಾಯವೇ ವಿಶೇಷವಾದ ದುಃಖಕ್ಕೆ ಕಾರಣವಾಗುವುದೆಂದು ಭಾವಿಸುವೆನು.

**ವಾಸಂತಿ**— ದೇವಾ! ನೀನಂದು ಇಲ್ಲಿಯ—

— ಚಂಪಕಮಾಲೆ —

ನಿರುಕಿಸುತಿರ್ದೆ ಬಳ್ಳಿವನೆಯೊಳ್ಜನಕಾತ್ಮಜೆ ಪೋದ ಮಾರ್ಗಮಂ
ಚಿರಮವಳಾ ನದೀಪುಲಿನಹಂಸವಿಲಾಸಮನೀಕ್ಷಿಸಿರ್ದು ಮ— ।
ತ್ತಿರದೆ ಬರುತ್ತಿರಲ್ತಡೆದುದೇಕೆನೆ ನೀಂ ಮುಳಿದಿರ್ದ ಭಾವಮಂ
ನಿರುಕಿಸಿ ಭೀತಿಯಿಂ ನಡುಗಿ ಕೈಮುಗಿದಳ್ಕರಮೊಪ್ಪುವಂದದಿಂ ॥ ೩೭ ॥

**ಸೀತೆ**— ವಾಸಂತಿಯೆ, ನಿನ್ನ ಚಿತ್ತವು ಕಠಿನತರವಾದುದು. ಮರ್ಮೋದ್ಘಾಟನೆಗೆಯ್ಯುವ ಇಂತಹ ಮಾತುಗಳಿಂದ ಮಂದಭಾಗಿನಿಯಾದ ನನ್ನನ್ನೂ ಆರ್ಯಪುತ್ರನನ್ನೂ ಮರುಗಿಸುತ್ತಿರುವೆಯಲ್ಲ!

**ರಾಮ**— ಓಹೋ ಜಾನಕಿ, ಬಹು ಕೋಪವುಳ್ಳವಳಾಗಿ ಹಟವನ್ನು ಸಾಧಿಸುತ್ತಿರುವೆಯೇನು? ಇಲ್ಲೇ ಅತ್ತಿತ್ತ ತೋರಿ ಬರುವೆಯಾದರೂ ದಯೆಯನ್ನೇನೂ ತೋರಿಸದಿರುವೆಯಲ್ಲ! ನಲ್ಲೇ, ಇಲ್ಲಿರುವ ನನ್ನ ಸ್ಥಿತಿಯನ್ನು ಬಲ್ಲೆಯೇನು?

— ಮತ್ತೇಭವಿಕ್ರೀಡಿತ —

ಒಡೆಗುಂ ಕಲ್ಲೆರ್ದೆ ದೇಹಬಂಧಮಿದೊ ತಾಂ ವಿಧ್ವಂಸಮಂ ಪೊಂದುಗುಂ
ಕಡುಪಿಂ ಸ್ವಾಂತದೊಳಗ್ನಿ ದಳ್ಳುರಿಗುಮಿನ್ನೀ ಲೋಕಮೇ ಶೂನ್ಯಮಾ ।

ಕಡುಬನ್ನಕ್ಕೊಳಗಾದ ಜೀವಮನಿಶಂ ಗಾಢಾಂಧಕಾರಕ್ಕಿದೋ
ಕೆಡೆಗುಂ ಮೋಹಮೆ ಸುತ್ತಲುಂ ಕವಿಗುಮಿ ದುರ್ಭಾಗ್ಯನಿನ್ನೇವೆನೋ
॥ ೩೮ ॥

(ಎಂದು ಮೂರ್ಛೆಹೊಂದುವನು.)

ಸೀತೆ—ಆಹಾ ಕಷ್ಟವೇ! ಆರ್ಯಪುತ್ರನು ಮತ್ತೂ ಮೂರ್ಛಿತ ನಾದನು.

ವಾಸಂತಿ—ಸ್ವಾಮಿಯೆ, ಸಮಾಧಾನತಂದುಕೊಳ್ಳಬೇಕು! ಸಮಾಧಾನತಂದುಕೊಳ್ಳಬೇಕು!

ಸೀತೆ—ಆರ್ಯಪುತ್ರನೆ, ಸಮಸ್ತಲೋಕಗಳ ಯೋಗಕ್ಷೇಮಗಳಿಗೂ ಆಧಾರವಾಗಿರುವ ನಿನ್ನ ದಿವ್ಯಜನ್ಮವು ನಿರ್ಭಾಗ್ಯವತಿಯಾದ ನನ್ನ ಸಲುವಾಗಿ ಬಾರಿ ಬಾರಿಗೂ ಸಂಶಯಾಸ್ಪದವಾಗಿರುವುದು ಎಂದರೆ ನನ್ನ ಹಾಳು ಜನ್ಮವನ್ನು ಎಷ್ಟು ನಿಂದಿಸಿದರೂ ಸಾಲದು.

ತಮಸೆ—ಮಗಳೆ, ಸಮಾಧಾನಹೊಂದು! ಸಮಾಧಾನಹೊಂದು! ಈಗಲೂ ನಿನ್ನ ಹಸ್ತಸ್ಪರ್ಶವೇ ರಾಮಚಂದ್ರನಿಗೆ ಜೀವನೋಪಾಯವು.

ವಾಸಂತಿ—ಕಷ್ಟವೇ! ಸ್ವಾಮಿಗೆ ಇನ್ನೂ ಉಚ್ಛ್ವಾಸವಿಲ್ಲವಲ್ಲ! ಪ್ರಿಯಸಖಿಯಾದ ಸೀತೇ ನೀನೆಲ್ಲಿರುವೆ? ನಿನ್ನ ಪ್ರಾಣವಲ್ಲಭನನ್ನು ಜಾಗ್ರತೆಯಾಗಿ ಆರೈಕೆಮಾಡು.

(ಸೀತೆಯು ಸಂಭ್ರಮದೊಡನೆ ಹೋಗಿ ರಾಮನ ಹೃದಯಲಲಾಟಗಳನ್ನು ಸ್ಪರ್ಶಿಸುವಳು.)

ವಾಸಂತಿ—ಭಾಗ್ಯವಿಶೇಷದಿಂದ ರಾಮಚಂದ್ರನು ಪ್ರಜ್ಞೆಹೊಂದಿದನು.

ರಾಮ— — ಮತ್ತೇಭವಿಕ್ರೀಡಿತ —

ಮಿಗೆಯುಂ ದೇಹದ ಧಾತುಗಳ್ಗೆ ಸೊದೆಯಂ ಲೇಪಿಪ್ಪರಾರಿರ್ಕುಮಿ
ಬಗೆಯಿಂದಂ ಮರಳ್ದಿಂ ಬರ್ದುಂಕಿಪ ತೆರಂ ಸಂಸ್ಪರ್ಶಮಾದಪ್ಪುದೈ

ಸೊಗಮೇನಿಂದ್ರಿಯತೃಪ್ತಿಯಿಂದೆ ಪರಮಾನಂದಾಖ್ಯಸಂಮೋಹಮಂ
ಬಗೆಗೊಂದಿಪ್ಪುದು ವಾಗಗೋಚರಮೆನಲ್ಸಂಸ್ಪರ್ಶಮತ್ಯದ್ಭುತಂ ॥ ೩೯ ॥

(ಕಣ್ಣುಮುಚ್ಚಿಕೊಂಡು ಸಂತೋಷದೊಡನೆ) ಸಖಿ ವಾಸಂತಿ, ಭಾಗ್ಯವಿಶೇಷ ದಿಂದ ನೀನು ವರ್ಧಿಸುತ್ತಿರುವೆ!

ವಾಸಂತಿ— ಅದು ಹೇಗೆ?

ರಾಮ— ಸಖಿ, ಇನ್ನೇನು? ಸೀತೆ ಬಂದಳು!

ವಾಸಂತಿ— ಸ್ವಾಮಿ, ಅವಳೆಲ್ಲಿರುವಳು?

ರಾಮ— (ಸ್ಪರ್ಶಸುಖವನ್ನು ಅಭಿನಯಿಸಿ) ನೋಡು. ಇಲ್ಲೇ ಮುಂದೆ ನಿಂತುಕೊಂಡಿರುವಳು.

ವಾಸಂತಿ— ಸ್ವಾಮಿ, ರಾಮಚಂದ್ರ! ನೀನು, ಮೊದಲೇ ಪ್ರಿಯ ಸಖಿಯ ವಿಪತ್ತಿನಿಂದ ಜರ್ಜರಿತೆಯಾಗಿರುವ ಈ ಮಂದಭಾಗಿನಿಯನ್ನು ಮರ್ಮಭೇದಕಗಳಾದ ಇಂತಹ ಪ್ರಲಾಪಗಳ ಮೂಲಕ ಮತ್ತೂ ಮತ್ತೂ ದಹಿಸುತ್ತಿರುವೆಯೇಕೆ?

ಸೀತೆ— (ಸ್ವಗತಂ) ನಾನೀಗ ಇಲ್ಲಿಂದ ಮರಳಿಹೋಗಬೇಕೆಂದಿರು ವೆನು. ಆದರೆ, ಚಿರಕಾಲಪ್ರವೃದ್ಧವಾದ ಪ್ರೇಮಾತಿಶಯದಿಂದ ಆಹ್ಲಾದವನ್ನು ಉಂಟುಮಾಡುವುದಾಗಿಯೂ ಶೀತಲವಾಗಿಯೂ ಇರುವ ಕಾಂತನ ಸಂಸ್ಪರ್ಶವನ್ನು ಹೊಂದಿ, ವಿರಹವೇದನೆಯಿಂದ ಕಂಪಿಸುತ್ತಿದ್ದ ನನ್ನ ಹಸ್ತಾಗ್ರವೀಗ ವಜ್ರಲೇಪವನ್ನು ಪಡೆದಂತೆ ಸ್ವಾಧೀನಗೆಟ್ಟಿರುವುದು.

ರಾಮ— ಗೆಳತಿ, ಇದೇನು ಪ್ರಲಾಪವೆ?

— ಉತ್ಪಲಮಾಲೆ —

ಆವ ಕರಂ ವಿವಾಹದೆ ಗೃಹೀತಮೊ ಕಂಕಣರಮ್ಯಮಿರ್ದು ಮ—
ತ್ತಾವ ಕರಂ ಸುಧಾಶಿಶಿರಮಿರ್ದುದೊ ಸೋಂಕುತಲೆನ್ನನಂದದಿಂ।

ಸೀತೆ— ಕಾಂತನೆ, ನೀನು ಅಂದಿನವನೇ ಆಗಿರುವೆಯಲ್ಲ!

ರಾಮ—
ಆವ ಕರಕ್ಕೆ ಮುಗ್ಧಲವಲೀನವಪಲ್ಲವಮೋ ಸಮಾನಮಿ—
ನ್ನಾವ ಕರಕ್ಕೆ ನೋಡಲೆಡಗೈಯೆಣೆಯಿರ್ದುದದಂ ತುಡುಂಕಿದೆಂ ॥ ೪೦ ॥

ಸೀತೆ— (ಸ್ವಗತಂ) ಇದೇನು! ಆರ್ಯಪುತ್ರನ ಸ್ಪರ್ಶದಿಂದ ಮೋಹಿತೆಯಾದ ನನಗೆ ಪ್ರಮಾದವೇ ಉಂಟಾಯಿತಲ್ಲ!

ರಾಮ—ಗೆಳತಿಯಾದ ವಾಸಂತಿಯೆ, ಸೀತೆಯ ಸಂಸ್ಪರ್ಶದಿಂದ ಉಂಟಾದ ಆನಂದಾತಿಶಯದ ಮೂಲಕ ಪರಾಧೀನನಾಗುತ್ತಿರುವೆನು. ಆದುದರಿಂದ ಇವಳನ್ನು ನೀನೇ ಹಿಡಿದುಕೊ!

ವಾಸಂತಿ—ಕಷ್ಟವೆ! ಇದು ಉನ್ಮಾದವೇ ಸರಿ.

(ಸಂಭ್ರಮದೊಡನೆ ಸೀತೆಯು ಕೈಗಳನ್ನು ಬಿಡಿಸಿಕೊಂಡು ಹಿಂಜರಿಯುವಳು)

ರಾಮ— ಅಕಟಾ! ಇದೆಂತಹ ಪ್ರಮಾದವು—

ಕಂ॥ ನಡುಕಬೆಮರ್ಗಳ ಕೂಟಬೆ
ಜಡತೆಯನಾಂತವಳ ಪಾಣಿಪಲ್ಲವವಿಾಗಳ್ ।
ನಡುಕಬೆಮರ್ಗಳ ಕೂಟದೆ
ಜಡತೆಯನಾಂತೆನ್ನ ಪಾಣಿಯಿಂ ಜಾರ್ದುದಹೋ ॥೪೧॥

ಸೀತೆ—ಆಹಾ! ಆರ್ಯಪುತ್ರನು ಬಹಳವಾಗಿ ತಳಮಳಿಸುತ್ತಿರುವ ಆತ್ಮವನ್ನು ಇನ್ನೂ ಸಮಾಧಾನಹೊಂದಿಸಿಕೊಳ್ಳಲಿಲ್ಲವಲ್ಲ!

ತಮಸೆ—(ಸ್ನೇಹಕುತೂಹಲಮಂದಹಾಸಗಳೊಡನೆ)

— ಮತ್ತೇಭವಿಕ್ರೀಡಿತ —

ಮನಕಾನಂದಮೆನಿಪ್ಪ ನಲ್ಲನ ಕರಸ್ಪರ್ಶಂಬಡಲ್ಜಾನಕೀ
ತನು ರೋಮಾಂಚನಿದಾಘಕಂಪಯುತವಾಗಿರ್ಪಂದಮಂ ವೀಕ್ಷಿಸ- ।
ಲ್ಕನಿಲಪ್ರೇರಿತನೂತ್ನಶೀಕರದೆ ನಾಂದಿರ್ಪಾ ಕದಂಬದ್ರುಮಂ
ನನೆಯಿಂ ತೀವಿ ಚಲಿಪ್ಪುದಂ ನೆನೆಯಿಪಂದಂ ಪುಟ್ಟಿಕುಂ ಭ್ರಾಂತಿಯಂ

ಸೀತೆ— (ಸ್ವಗತಂ) ಆಹಾ! ಮನಸ್ಸನ್ನು ದಮನಮಾಡಿಕೊಳ್ಳದ ನಾನೀಗ ಪೂಜ್ಯಳಾದ ತಮಸೆಯ ಪರಿಹಾಸ್ಯಕ್ಕೆ ಗುರಿಯಾದೆನು. "ಪರಿತ್ಯಾಗದ ಮುಂದೆ ಎಂತಹ ಪ್ರೇಮಾತಿಶಯವು ಎಂದು" ಆಕೆಯು ಭಾವಿಸಿಕೊಳ್ಳದೆ ಇರಲಾರಳು.

**ರಾಮ**—(ಸುತ್ತಲೂ ನೋಡಿ) ಹಾ! ಇದೇನು! ಸೀತೆಯಿಲ್ಲವಲ್ಲಾ ಎಲೌ ನಿರ್ದಯಳಾದ ಸೀತೇ!

**ಸೀತೆ**—ನಾನು ನಿರ್ದಯಳೇ ಸರಿ! ಹೀಗೆ ಸಂತಪ್ತನಾಗಿರುವ ನಿನ್ನನ್ನು ನೋಡುತ್ತ ಬದುಕುತ್ತಿರುವೆನಲ್ಲ!

**ರಾಮ**—ಪ್ರಿಯೇ ನೀನೆಲ್ಲಿರುವೆ? ದೇವಿ, ಪ್ರಸನ್ನಳಾಗು! ಪ್ರಸನ್ನಳಾಗು! ಇಂತಹ ಪರಿಸ್ಥಿತಿಯಲ್ಲಿರುವ ನನ್ನನ್ನು ಬಿಡಬಾರದು!

**ಸೀತೆ**—ಆರ್ಯಪುತ್ರನೆ, ನಿನ್ನ ಮಾತಿದು ವಿಪರೀತವಾದುದಲ್ಲವೆ?

**ವಾಸಂತಿ**—ಸ್ವಾಮಿಯೆ, ಪ್ರಸನ್ನನಾಗು! ಪ್ರಸನ್ನನಾಗು! ವ್ಯಸನ ಪಡುತ್ತಿರುವ ನಿನ್ನ ಆತ್ಮವನ್ನು ಲೋಕೋತ್ತರವಾದ ಧೈರ್ಯದಿಂದಲೇ ಸಮಾಧಾನಪಡಿಸಿಕೊಳ್ಳಬೇಕು. ಅಲ್ಲದೆ, ನಿನ್ನ ಕಾಂತೆಯೆಲ್ಲಿರುವಳು?

**ರಾಮ**—(ಸರಿಯಾಗಿ ನೋಡಿ) ಸೀತೆಯು ಇಲ್ಲವೇ ಇಲ್ಲ. ಇರುತ್ತಿದ್ದರೆ, ಸಖಿಯಾದ ವಾಸಂತಿಗೆ ತೋರದಿರಲು ಕಾರಣವಿಲ್ಲ. ನನಗೆ ಸ್ವಪ್ನವಾಗಿರಬಹುದೆಂದರೆ, ನಾನು ನಿದ್ರಿಸಲಿಲ್ಲವಲ್ಲಾ! ರಾಮನಿಗೆ ನಿದ್ರೆಯಾದರೂ ಹೇಗೆ ಬರಬೇಕು? ಹಾಗಾದರಿದು ಮತ್ತೇನಿರಬಹುದು? ಬಾರಿಬಾರಿಗೂ ನನ್ನನ್ನು ಬಿಡದೆ ಅನುಸರಿಸುತ್ತಿರುವ ಮನಃಕಲ್ಪಿತವಾದ ವಿರಹವಿಕಾರವೇ ಹೊರತು ಬೇರೊಂದಲ್ಲ.

**ಸೀತೆ**—ಕಠಿನಚಿತ್ತಳಾದ ನಾನು ಆರ್ಯಪುತ್ರನನ್ನು ವಂಚಿಸಿದೆನು.

**ವಾಸಂತಿ**—ಸ್ವಾಮಿಯೇ ನೋಡು! ನೋಡು! ಇಲ್ಲಿ ಆ ಪುಲಸ್ತ್ಯನಂದನನಾದ—

— ಉತ್ಪಲಮಾಲೆ —

ರಕ್ಕಸನೇರ್ದ ಕರ್ಬುನದ ತೇರುಡಿಯುತ್ತೆ ಜಟಾಯುಘಾತದಿಂ
ಪಕ್ಕದೊಳಿರ್ದ ಭೀಕರಮುಖಂಗಳ ಕಳ್ತೆಗಳೆಲ್ಲ ತೋರ್ಪುದಾ ।
ತೆಕ್ಕನೆ ಛಿನ್ನಮಾದ ವಿಹಗೇಂದ್ರನ ರೆಕ್ಕೆಯದಿತ್ತಲಿತ್ತಣಿಂ
ಪಕ್ಕನೆ ಮಿಂಚನಭ್ರಮೆನೆ ಸೀತೆಯನಾಗಸಕುಯ್ದನಾ ಖಳಂ ॥ ೪೩ ॥

ಸೀತೆ—(ಭಯದೊಡನೆ) ಆರ್ಯಪುತ್ರ, ಮರಣಕ್ಕೆ ಗುರಿಯಾಗುತ್ತಿರುವ ತಂದೆಯನ್ನು ರಕ್ಷಿಸು! ರಕ್ಷಿಸು! ದುಷ್ಟರಾಕ್ಷಸನು ನನ್ನನ್ನು ಕೊಂಡೊಯ್ಯುತ್ತಿರುವನಲ್ಲಾ!

ರಾಮ—(ಫಕ್ಕನೆ ಮೇಲಕ್ಕೆ ಎದ್ದು) ಎಲ! ಎಲಾ! ಪಾಪಾತ್ಮನೇ! ತಂದೆಯಾದ ಜಟಾಯುವಿನ ಪ್ರಾಣವನ್ನೂ ಕಾಂತೆಯನ್ನೂ ಅಪಹರಿಸುತ್ತ ನೀನೆಲ್ಲಿ ಹೋಗುವೆ?

ವಾಸಂತಿ—ರಾಕ್ಷಸಕುಲಕ್ಕೇ ಪ್ರಳಯಧೂಮಕೇತುವಿನಂತಿರುವ ದೇವನೇ, ನಿನ್ನ ಕೋಪಕ್ಕೆ ಗುರಿಯಾದವನು ಇನ್ನೂ ಬದುಕಿರುವನೇನು?

ಸೀತೆ—ಆಹಾ! ನಾನು ಭ್ರಮಿಸಿದೆನು.

ರಾಮ—ಈಗಿನ ದಶಾವಿಪರ್ಯಯವು ಅನ್ಯಾದೃಶವಾದುದು—

— ಮಹಾಸ್ರಗ್ಧರೆ —

ವಿವಿಧೋಪಾಯಂಗಳಿಂದಂ ಮನಕಿರದೆ ವಿರಾಮಂ ಮಹಾವೀರರೆಲ್ಲ
ರ್ವರಂಗೊಳ್ಳಲ್ಕೆಲೋಕಾದ್ಭುತರಸಮುದೆವಿಸ್ಫೂರ್ತಿಯಿಂದುಕ್ಕಿದಾಗಳ್।
ತವದಂದಂ ವಿಪ್ರಯೋಗವ್ಯಸನಮಿರಲದುಂ ವೈರಿನಾಶಾಂತಮಾಯ್ತಾ
ಬವರಂ ತೀರ್ದಾ ಬಳಿಕ್ಕಂಬಿಡದೆಸುಡುಗುಮೆಂದುಂವಿಯೋಗಾಗ್ನಿಯೆನ್ನಂ
॥ ೪೪ ॥

ಸೀತೆ—ಪೂರ್ವವಿರಹದಲ್ಲಿ ಬಹುಮಾನಿತೆಯಾಗಿದ್ದೆನು. ಆದರೆ, ಅವಧಿಯಿಲ್ಲದ ಈ ವಿರಹದಲ್ಲಿ ಭಗ್ನಮನೋರಥೆಯಾಗಿರುವೆನು.

ರಾಮ—ಹಾ ಕಷ್ಟವೇ!

— ಶಾರ್ದೂಲವಿಕ್ರೀಡಿತ —

ವ್ಯರ್ಥಂ ತಾಂ ಕಪಿರಾಜಸಖ್ಯಮನಿತುಂ ಕೀಶಂಗಳಾ ಸಾಹಸಂ
ವ್ಯರ್ಥಂ ಜಾಂಬವಬುದ್ಧಿಯಂತೆಯೆ ಮರುತ್ಸಂಜಾತನುಲ್ಲಂಘನಂ।
ವ್ಯರ್ಥಂ ವೀಕ್ಷಿಸಲೆತ್ತಲಪ್ಪುದೊ ನಳಂ ಕಲ್ಪಿಪ್ಪ ಮಾರ್ಗಕ್ರಮಂ
ವ್ಯರ್ಥಂ ಲಕ್ಷ್ಮಣಬಾಣಮೆತ್ತಲದನೇಂ ಪೊಂದಿರ್ಪೆಯೋ ನಲ್ಲೆ ನೀಂ
॥ ೪೫ ॥

ಸೀತೆ—ನಾನೀಗ ಅಂದಿನ ವಿರಹವನ್ನು ಬಹುಮಾನಿಸುತ್ತಿರುವೆನು.

ರಾಮ—ಗೆಳತಿಯಾದ ವಾಸಂತಿಯೆ, ಈಗ ರಾಮದರ್ಶನವು ಸ್ನೇಹಿತರ ದುಃಖಕ್ಕಾಗಿಯೇ ಇರುವುದು. ಹೀಗೆಯೇ ಬಹಳ ಸಮಯ ನಿನ್ನನ್ನು ಮರುಗಿಸುತ್ತಿರುವುದು ಸರಿಯಲ್ಲದ ಕಾರಣ ಇಲ್ಲಿಂದ ಹೊರಟು ಹೋಗುವುದಕ್ಕೆ ನನಗೆ ಅನುಮತಿಕೊಡಬೇಕು.

ಸೀತೆ—(ಸಂಭ್ರಾಂತಳಾಗಿ ತಮಸೆಯನ್ನು ಆಲಿಂಗಿಸಿಕೊಂಡು) ಪೂಜ್ಯಳಾದ ತಮಸೆ, ಆರ್ಯಪುತ್ರನೀಗ ಹೋಗುವನು. ನಾನೇನು ಮಾಡಲಿ? (ಎಂದು ಹೇಳುತ್ತ ಮೂರ್ಛೆಹೊಂದುವಳು)

ತಮಸೆ—ಮಗಳೆ, ಸಮಾಧಾನ ತಂದುಕೊ! ಸಮಾಧಾನ ತಂದುಕೊ! ವಿಧಿಯು ನಿನಗೆ ಅನುಕೂಲವಾಗುವುದು! ನಾವೀಗ ಚಿರಂಜೀವಿಗಳಾದ ಕುಶಲವರಿಗೆ ವರ್ಷವರ್ಧಂತಿಯು ಸಲುವಾಗಿರುವ ಶುಭಕರ್ಮಗಳನ್ನು ನೆರವೇರಿಸಲು ಗಂಗಾದೇವಿಯ ಸನ್ನಿಧಿಗೇನೇ ಹೋಗಬೇಕು.

ಸೀತೆ—ಪೂಜ್ಯಳೆ, ಪ್ರಸನ್ನಳಾಗು! ದುರ್ಲಭವಾದ ದರ್ಶನವುಳ್ಳ ಸ್ವಾಮಿಯನ್ನು ಕ್ಷಣಮಾತ್ರವಾದರೂ ನೋಡಿಕೊಳ್ಳುವೆನು.

ರಾಮ—ವಾಸಂತಿಯೆ, ಅಶ್ವಮೇಧಯಜ್ಞದಲ್ಲಿ ನನಗೀಗ ಸಹಧರ್ಮಿಣಿಯಿರುವಳು.

ಸೀತೆ—(ಆಕ್ಷೇಪದೊಂದಿಗೆ) ಆರ್ಯಪುತ್ರ, ಅವಳಾವಳು?

ವಾಸಂತಿ—ಪುನರ್ವಿವಾಹವು ನಡೆದಿರುವುದೇನು?

ರಾಮ—ಇಲ್ಲ! ಇಲ್ಲ! ಪುನರ್ವಿವಾಹವಿಲ್ಲ! ಸುವರ್ಣದ ಸೀತಾಪ್ರತಿಮೆಯು.

ಸೀತೆ—(ನಿಟ್ಟುಸಿರು ಕಂಬನಿಗಳೊಡನೆ) ಆಹಾ! ಆರ್ಯಪುತ್ರನೇ ನೀನೀಗ ನನ್ನ ಪರಿತ್ಯಾಗಶಲ್ಯವನ್ನು ಪರಿಹರಿಸಿ ಅತ್ಯಂತಪ್ರಿಯಕರನಾಗಿರುವೆ.

ರಾಮ—ವಾಸಂತಿಯೆ, ಸುವರ್ಣಮಯವಾದ ಆ ಸೀತಾಪ್ರತಿಮೆಯಲ್ಲಾದರೂ ಕಂಬನಿದುಂಬಿದ ದೃಷ್ಟಿಗಳನ್ನು ಹರಿಯಬಿಟ್ಟು ಮನಸ್ಸಿಗೆ ಸಮಾಧಾನವನ್ನು ಕಲ್ಪಿಸಿಕೊಳ್ಳುತ್ತಿರುವೆನು.

ಸೀತೆ—ಯಾವ ಪ್ರತಿಮೆಯು ಆರ್ಯಪುತ್ರನಿಂದ ಬಹುಮಾನಿತ ವಾಗಿರುವುದೋ, ಯಾವ ಪ್ರತಿಮೆಯು ಸಂತಪಿಸುತ್ತಿರುವ ಪ್ರಿಯನನ್ನು ಸಮಾಧಾನಪಡಿಸುತ್ತ ಪ್ರಪಂಚದಲ್ಲಿ ಜೀವಧಾರಣೆಮಾಡುತ್ತಿರುವಂತೆ ಎಸಗುತ್ತಿರುವುದೋ ಅದು ಧನ್ಯವೇ ಸರಿ.

ತಮಸೆ— (ಸ್ನೇಹಮುಂದಹಾಸಬಾಷ್ಪಗಳೊಡನೆ ಸೀತೆಯನ್ನಾಲಿಂಗಿಸಿ) ಮಗಳೆ, ನೀನೀಗ ನಿನ್ನನ್ನೇ ಶ್ಲಾಘಿಸಿಕೊಳ್ಳುತ್ತಿರುವೆಯಲ್ಲ!

ಸೀತೆ—(ಲಜ್ಜೆಯಿಂದ) ಪೂಜ್ಯಳು ನನ್ನನ್ನು ಪರಿಹಾಸಮಾಡುತ್ತಿರುವಳು.

ವಾಸಂತಿ—ಸ್ವಾಮಿಯೇ, ಈಗ ನಿನ್ನ ಸಂದರ್ಶನ, ಸಂಭಾಷಣ ಮೊದಲಾದ ಸಂಬಂಧವುಂಟಾದುದೇ ನಮಗೆ ಮಹಾಪ್ರಸಾದವು. ಆದುದರಿಂದ ನಿನ್ನ ಮುಂದಿನ ಕಾರ್ಯಕ್ಕೆ ವಿಘ್ನವುಂಟಾಗದ ಹಾಗೆ ನೋಡಿಕೊಳ್ಳಬೇಕಾದುದು ನಮ್ಮ ಕರ್ತವ್ಯವು.

ರಾಮ—ಹಾಗೆಯೇ ಆಗಲಿ.

ಸೀತೆ—ಈಗ ವಾಸಂತಿಯು ನನಗೆ ಪ್ರತಿಕೂಲಳಾದಳು.

ತಮಸೆ—ಮಗಳೆ, ನಾವೂ ಕೂಡ ಹೋಗೋಣ.

ಸೀತೆ—ಹಾಗೆಯೇ ಆಗಲಿ.

ತಮಸೆ—ನೀನಿಲ್ಲಿಂದ ಹೇಗೆ ಹೋಗುವೆ? ನಿನಗೀಗ—

ಕಂ॥ ಪಿರಿದಾಸೆಯಿಂದಮಿನೆಯನೊ
ಳಿರದೂರಿರೆ ದೃಷ್ಟಿ ಬಡಿದು ಕೀಲಿಸಿದಂದಂ।
ತರಳೇ ಮರ್ಮಚ್ಛೇದಕೆ
ಸರಿಯೆನಿಪಂತದನ ಸೆಳೆಯೆ ಮಿಗೆಯುಂ ತಡೆಗುಂ ॥ ೪೬ ॥

ಸೀತೆ—ಪುಣ್ಯಶಾಲಿಗಳಿಗೆ ಮಾತ್ರವೇ ಗೋಚರಿಸಬಹುದಾದ ಆರ್ಯಪುತ್ರನ ಚರಣಕಮಲಗಳಿಗೆ ವಂದಿಸುವೆನು (ಎನ್ನುತ್ತ ಮೂರ್ಛೆಹೊಂದುವಳು).

ತಮಸೆ—ಮಗಳೆ, ಸಮಾಧಾನತಂದುಕೊ!

ಸೀತೆ—(ಹೇಗಾದರೂ ಸಮಾಧಾನಹೊಂದಿ) ಮೋಡದ ಮಧ್ಯದಿಂದ ಪೂರ್ಣಚಂದ್ರನ ಸಂದರ್ಶನವು ಇನ್ನೆಷ್ಟು ಸಮಯದಲ್ಲಿ ತಾನೇ ಉಂಟಾಗುವುದೋ?

ತಮಸೆ—ಈ ಸಂವಿಧಾನವು ಆಶ್ಚರ್ಯಕರವೇ ಸರಿ—

— ಮತ್ತೇಭವಿಕ್ರೀಡಿತ —

ಲಸದಾವರ್ತತರಂಗಬುದ್ಬುದಮೆನಲ್ಕಾನಾವಿಕಾರಂಗಳಂ
ವಸುಧಾಭಾಗದೊಳೊಂದುತಿರ್ಪುದೆನಸುಂ ಪಾನೀಯಮೊಂತಂತೆಯೇ।
ಪೆಸರಿಂದಂ ಬಹುಭೇದಮೆನ್ನಿಸೆ ನಿದಾನಂ ಬೇರೆವೇರಪ್ಪೊಡಂ
ರಸಮೊಂದೇ ಕರುಣಂ ವಲಂ ಪರಿಕಿಸಲ್ಕಾಗ್ಯಾದಮೇ ವ್ಯರ್ಥಕಂ ॥೪೭॥

ರಾಮ—ವಿಮಾನರಾಜನೆ, ಈ ದೆಸೆಗಾಗಿ ಬೇಗಬೇಗನೆ ಹೋಗಬೇಕು. (ಎಲ್ಲರೂ ಎದ್ದು ನಿಲ್ಲುವರು)

ತಮಸೆಮಾಸಂತಿಯರು—(ಸೀತಾರಾಮರನ್ನು ಉದ್ದೇಶಿಸಿ)

— ಮತ್ತೇಭವಿಕ್ರೀಡಿತ —

ನೆರೆದೆಮ್ಮೊಂದಿಗೆ ದೇವವಾಹಿನಿಯುಮಿಾ ವಿಶ್ವಂಭರಾದೇವಿಯುಂ
ನಿರುತಂ ಮಂತ್ರಗಳಂ ಪ್ರಯೋಗಿಪ ಕುಲಾಧೀಶಂ ಸಹಸ್ರಾಂಶುವುಂ।
ವರವಿಪ್ರರ್ಷಿವಸಿಷ್ಠನುಂ ಮೆರೆವ ಪತ್ನೀಯುಕ್ತನಾಗಿರ್ದದೋ
ಪೊರೆಗುಂ ನಿನ್ನನನಾರತಂ ಚಿರಸುಖಶ್ರೀಯುಃಪ್ರದಾನಂಗಳಿಂ ॥ ೪೮ ॥

(ಎಂದೆಲ್ಲರೂ ಹೊರಟು ಹೋಗುವರು)

ಇಂತಿದು ಛಾಯೆಯೆಂಬ

ತೃತೀಯಾಂಕಂ

## — ಚತುರ್ಥಾಂಕಂ —

(ಬಳಿಕ ದಂಡಾಯನಸೌಧಾತಕಿಯರೆಂಬ ತಾಪಸಕುಮಾರರು ಪ್ರವೇಶಿಸುವರು.)

**ದಂಡಾಯನ**— ಸೌಧಾತಕಿಯೇ, ಪೂಜ್ಯನಾದ ವಾಲ್ಮೀಕಿಯ ಬಳಿಗೆ ಆಹೂತರಾಗಿ ಬಂದಿರುವ ಅತಿಥಿಗಳನ್ನು ಸತ್ಕರಿಸುವುದಕ್ಕಾಗಿ ಸಿದ್ಧಪಡಿಸುತ್ತಿರುವ ಸನ್ನಾಹವಿಶೇಷಗಳಿಂದ ನಮ್ಮ ಆಶ್ರಮಕ್ಕೆ ನೂತನವಾದ ಶೋಭೆಯುಂಟಾಗಿರುವುದು. ಅದು ಹೇಗೆಂದರೆ—

— ಶಾರ್ದೂಲವಿಕ್ರೀಡಿತ —

ಮಂದೋಷ್ಣಂ ಬಸಿದನ್ನಮುಂಡಮಿದನೀಂಟುತ್ತೀಂದ ಸಾರಂಗಿಯೋ
ರಂದಂ ಮುಂಬರಿಯಲ್ಕಮೂರುವೊಡನೈತಂದೀಂಟಲುಂ ತೀರದಿ—
ರ್ಪಂದಂ ತೋರ್ಪುದೆಯಲ್ತೆ! ತುಪ್ಪವೆರೆದಾ ಶಾಲ್ಯಾನ್ನಗಂಧಂ ಹೃದಾ
ನಂದಂ ಪೆರ್ಚುವ ರೀತಿಯಿಂ ಗಮಗಮಿಪ್ಪೀ ಶಾಕಪಾಕಂಗಳೇಂ? ॥ ೧ ॥

**ಸೌಧಾತಕಿ**— ಉದ್ದುದ್ದಗಡ್ಡಗಳಿಂದಲೂ ಬಗೆಬಗೆಯ ವೇಷಗಳಿಂದಲೂ ಕೂಡಿದವರಾಗಿ ನಮ್ಮ ಅನಧ್ಯಯನಕ್ಕೆ ಹೇತುಭೂತರಾಗಿ ತಪೋಧನರು ಬಂದಿರುವುದು ಬಹುಸಂತೋಷಕರವೇ ಸರಿ.

**ದಂಡಾಯನ**—(ನಕ್ಕು) ಸೌಧಾತಕಿಯೆ, ಗುರುಗಳಲ್ಲಿ ನಿನಗಿರತಕ್ಕ ಪೂಜ್ಯಬುದ್ಧಿಗೆ ಕಾರಣವು ವಿಚಿತ್ರವಾದುದು.

**ಸೌಧಾತಕಿ**—ದಂಡಾಯನನೆ, ಹೆಂಗುಸರ ದೊಡ್ಡ ಗುಂಪಿಗೆ ಅಧ್ಯಕ್ಷನಾಗಿ ಬಂದಿರುವ ಅತಿಥಿಯು ಯಾವನಾಗಿರಬಹುದೋ?

**ದಂಡಾಯನ**—ಸಾಕು! ಸಾಕು! ಪರಿಹಾಸವೆ? ಋಷ್ಯಶೃಂಗಮುನಿಯ ಆಶ್ರಮದಿಂದ ಅರುಂಧತಿಯನ್ನು ಅನುಸರಿಸಿ ಬಂದ ಕೌಸಲ್ಯೆ ಮೊದಲಾದ ಮಹಾರಾಣಿಯರಿಗೆ ರಕ್ಷಕನಾಗಿ ಪೂಜ್ಯತಮನಾಗಿರುವ ವಸಿಷ್ಠಮಹರ್ಷಿಯು ಗುರುವರನಾದ ವಾಲ್ಮೀಕಿಯ ಆಶ್ರಮಕ್ಕೆ ದಯಮಾಡಿರುವನು. ಆದರೆ, ನೀನೇಕೆ ಹೀಗೆ ಅಸಂಬದ್ಧವಾಗಿ ನುಡಿಯುತ್ತಿರುವೆ?

**ಸೌಧಾತಕಿ**— ಆತನು ವಸಿಷ್ಠನೇನು?

**ದಂಡಾಯನ**— ಹೌದು! ಆತನೇ ವಸಿಷ್ಠಮಹರ್ಷಿಯು.

**ಸೌಧಾತಕಿ**— ದೊಡ್ಡ ಹುಲಿಯೋ ತೋಳನೋ ಆಗಿರಬಹುದೆಂದೇ ನಾನು ತಿಳಿದಿದ್ದೆನು.

**ದಂಡಾಯನ**— ಮೂರ್ಖನೆ, ನೀನು ಹೇಳುತ್ತಿರುವುದೇನು?

**ಸೌಧಾತಕಿ**— ಆತನು ಇಲ್ಲಿಗೆ ಬಂದೊಡನೆ ಎರಡು ವರುಷಗಳಿಂದ ಚೆನ್ನಾಗಿ ಬಳೆದಿದ್ದ ನಮ್ಮ ಬಡಕಪಿಲೆಯು ಕೊಲೆಯಾಯಿತೆಂದು ನಾನು ಹೀಗೆ ಹೇಳುತ್ತಿರುವೆನು.

**ದಂಡಾಯನ**—"ಮಹಾತ್ಮರಾದ ಋಷಿಗಳು ಆಶ್ರಮಕ್ಕೆ ಬಂದರೆ, ಕೂಡಲೆ ಅವರನ್ನು ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿ ಮಾಂಸಯುಕ್ತವಾದ ಮಧುಪರ್ಕವನ್ನು ಸಮರ್ಪಿಸಬೇಕು" ಎಂದು ಸಾರುವ ವೇದವನ್ನು ಬಹುಮಾನಿಸುತ್ತ ಗೃಹಸ್ಥರಾದ ಋಷಿಗಳು ವೇದಶಾಸ್ತ್ರಸಂಪನ್ನನಾಗಿ ಬಂದಿರುವ ಅತಿಥಿಯ ಸಲುವಾಗಿ ಕಡಸನ್ನಾಗಲಿ ಹೋರಿಯನ್ನಾಗಲಿ ಹಿಂಸೆಗೆಯ್ದು ಪಾಕಮಾಡುತ್ತಿರುವರು. ಆ ವೈದಿಕಧರ್ಮವನ್ನೇ ಧರ್ಮಸೂತ್ರಕಾರರೂ ಕೂಡ ಅನುಮೋದಿಸುತ್ತಿರುವರು.

**ಸೌಧಾತಕಿ**— ಹಾಗಾದರೆ ನೀನು ಸೋತೆ!

**ದಂಡಾಯನ**— ಅದು ಹೇಗೆ?

**ಸೌಧಾತಕಿ**— ಪೂಜ್ಯನಾದ ವಸಿಷ್ಠನು ಬಂದಾಗ ಕಪಿಲೆಯ ಹಿಂಸೆಯು ನೆರವೇರಿತು. ಇಂದು ಬಂದ ರಾಜರ್ಷಿಯಾದ ಜನಕನಿಗೆ ನಮ್ಮ ಗುರುವಾದ ವಾಲ್ಮೀಕಿಮುನಿಯು ದಧಿಮಧುಗಳಿಂದಲೇ ಮಧುಪರ್ಕವನ್ನು ತಯಾರಿಸಿ ಉಪಚರಿಸಿದನು. ಕಡಸಿನ ಹಿಂಸೆಯೇನೂ ಆಗಿಲ್ಲವಲ್ಲ!

**ದಂಡಾಯನ**— ನಿನ್ನ ಸಂದೇಹವು ಸರಿಯಾದುದು. ಆದರೆ, "ಮಾಂಸವನ್ನು ವರ್ಜಿಸಿದವರಿಗೆ ದಧಿಮಧುಗಳಿಂದಲೇ ಮಧುಪರ್ಕವನ್ನು ತಯಾರಿಸಬೇಕು" ಎಂದು ಕೆಲವು ಋಷಿಗಳು ವಿಧಿಸುತ್ತಿರುವರು. ಜನಕನು ಮಾಂಸವನ್ನು ವರ್ಜಿಸಿದವನಾದಕಾರಣ ಆತನಿಗೆ ಹಾಗೆ ಮಾಡಲಾಯಿತು.

**ಸೌಧಾತಕಿ**—ಆದರೆ ಜನಕನು ಮಾಂಸಭಕ್ಷಣವಿರೋಧಿಯೇನು?

**ದಂಡಾಯನ**—ಕೇಳು. ಮಗಳಾದ ಸೀತಾದೇವಿಗೆ ಸಂಭವಿಸಿದ ದುರದೃಷ್ಟದ ಪರಿಣಾಮವನ್ನು ಕೇಳಿ ರಾಜ್ಯವನ್ನು ತೊರೆದು ವೈಖಾನಸನಾಗಿ ಕೆಲವು ವರುಷಗಳಿಂದಲೂ ಚಂದ್ರದ್ವೀಪತಪೋವನದಲ್ಲಿ ಕಠಿಣ ತಪಸ್ಸನ್ನು ಆಚರಿಸುತ್ತಿರುವನು.

**ಸೌಧಾತಕಿ**—ಹಾಗಾದರೆ ಅಲ್ಲಿಂದ ಇಲ್ಲಿಗೆ ದಯಮಾಡಿಸಲು ಕಾರಣವೇನಿರಬಹುದೊ?

**ದಂಡಾಯನ**—ಮೊದಲಿಂದಲೂ ಪ್ರಿಯಮಿತ್ರನಾದ ವಾಲ್ಮೀಕಿಯನ್ನು ನೋಡುವ ಸಲುವಾಗಿ.

**ಸೌಧಾತಕಿ**—ಹಾಗಾದರೀಗ ಆತನಿಗೆ ಕೌಸಲ್ಯಾದಿಬಂಧುಜನರ ಸಂದರ್ಶನವು ಸಂಭವಿಸಿರಬಹುದೇನು?

**ದಂಡಾಯನ**—ಇಲ್ಲ. ಕೌಸಲ್ಯೆ ತಾನಾಗಿ ಹೋಗಿ ಪ್ರೀತಿಯಿಂದ ಜನಕನನ್ನು ನೋಡಬೇಕೆಂದು ವಸಿಷ್ಠಮಹರ್ಷಿಯು ಅರುಂಧತೀದೇವಿಯನ್ನು ಈಗತಾನೇ ಹೇಳಿ ಕಳುಹಿಸಿರುವನು.

**ಸೌಧಾತಕಿ**—ಈ ಮುದುಕರೆಲ್ಲರೂ ಸ್ನೇಹಭಾವದಿಂದ ಒಟ್ಟುಗೂಡಿರುವಂತೆಯೇ ನಾವೆಲ್ಲರೂ ಬಟುಗಳೊಂದಿಗೆ ಸೇರಿ ಆಡುತ್ತ ಅನಧ್ಯಯನಮಹೋತ್ಸವವನ್ನು ನೆರವೇರಿಸೋಣ.

**ದಂಡಾಯನ**—ಜನಕರಾಯನೀಗ ವಸಿಷ್ಠವಾಲ್ಮೀಕಿಮುನಿಗಳನ್ನು ಸಂದರ್ಶಿಸಿ ಆಶ್ರಮದ ಹೊರಭಾಗದಲ್ಲಿರುವ ಮರದ ಕಟ್ಟೆಯಲ್ಲಿ ಮಂಡಿಸಿರುವನು. ಅದೋ ನೋಡು—

ಕಂ॥ ತಳಳಿಯ ಶೋಕಂ ಮನಮಂ
ಮರುಮರುಗಿಸಲೊಳಗೆ ಸಂದ ಪಾವಕನಿಂದಂ ।
ನೆರೆ ಬೆಂದ ಜೀರ್ಣವೃಕ್ಷದ
ತೆರದಿಂದಂ ತೋರ್ಪನಲ್ತೆ ಜನಕಂ ನಿಸದಂ ॥ ೨ ॥

(ಎಂದು ಹೊರಟುಹೋಗುವರು)

**ಇಂತಿದು ಮಿಶ್ರವಿಷ್ಕಂಭಂ**

(ಬಳಿಕ ಜನಕನು ಪ್ರವೇಶಿಸುವನು)

**ಜನಕ—** — ಸ್ರಗ್ಧರೆ —

ಬನ್ನಂ ಬೆನ್ನಟ್ಟಿತೇ ನಂದಿನಿಯನೆನುತದೇ ದುಃಖಶಲ್ಯಂ ಭರಂಗೊಂ
ಡೆನ್ನೀ ಚಿತ್ತಕ್ಕೆ ನಾಂಟಲ್ಜನಿಸಿದ ಬೆತೆಯಂ ತಾಳಲಾರ್ತಪ್ಪೆನಿಲ್ಲಂ ।
ಇನ್ನುಂ ಧಾರಾವಹಂತಾಂ ಕ್ರಕಚಮಿರದೆ ಮರ್ಮಂಗಳಂ ಕೊಯ್ಯುತಿರ್ಪಂ
ತೆನ್ನೀ ಮನ್ಯುಪ್ರಭಾವಂ ಪೊಸವೊಸತೆನಿಕುಂ ಶಾಂತಮಾದಪ್ಪುದಿಲ್ಲಂ ॥ ೩ ॥

ಆಹಾ ಕಷ್ಟವೆ! ಜರೆಯಿಂದಲೂ ದುಸ್ತರವಾದ ದುಃಖದಿಂದಲೂ ಪರಾಕ ಸಾಂತಪನವೇ ಮೊದಲಾದ ಕಷ್ಟತಪಸ್ಸುಗಳಿಂದಲೂ ಬತ್ತಿಹೋದ ಧಾತುಗಳುಳ್ಳದ್ದಾಗಿ ನಿರಾಲಂಬನವಾದ ಈ ಜೀರ್ಣದೇಹವು ಇನ್ನೂ ಬಿದ್ದುಹೋಗುವುದಿಲ್ಲವೆ? ಇದನ್ನು ಬುದ್ಧಿಪೂರ್ವಕವಾಗಿ ತ್ಯಜಿಸಿಬಿಡೋಣವೆಂದರೆ, “ಆತ್ಮಘಾತಮಾಡಿಕೊಂಡವರು ಗಾಂಧಾಂಧಕಾರಾವೃತಗಳಾದ ಅಸೂರ್ಯಗಳೆಂಬ ನರಕಲೋಕಗಳನ್ನು ಹೊಂದುವರು” ಎಂದು ವೇದ ಶಾಸ್ತ್ರಜ್ಞರಾದ ಋಷಿಪುಂಗವರ ಘೋಷಣೆಯು ಬೆದರಿಸುತ್ತಿರುವುದು. ಅನೇಕಸಂವತ್ಸರಗಳು ಕಳೆದುಹೋದರೂ ಕೂಡ ಸೀತಾವಿಷಯಕವಾದ ವ್ಯಸನವು ತಲೆದೋರುತ್ತಲೇ ಸಂತಾಪಗೊಳಿಸುತ್ತಿರುವುದರಿಂದ ಚಿತ್ತಶಾಂತಿಯಿಲ್ಲದೆ ಕಂಗೆಟ್ಟಿರುವೆನು. ಯಜ್ಞಭೂಮಿಯಲ್ಲಿ ಜನಿಸಿದ ಸೀತೇ! ನಿನಗೂ ಇಂತಹ ಪರಿಣಾಮವೆ! ಗೋಳೋ ಎಂದು ಅತ್ತುಬಿಡೋಣವೆಂದರೆ ಲಜ್ಜೆಯು ಬಿಡಲಾರದಲ್ಲಾ! ಆಹಾ ನಂದಿನಿ! ನಾನು ನಿನ್ನ ಅಂದಿನ ಸ್ಥಿತಿಯನ್ನು ಮರೆಯಲುಂಟೆ?

**ಕಂ॥** ಮಗಳೇ! ನೆನೆವೆನದೊಂದೊಂ
ದೊಗೆದಂದಂ ಮೃದುಲಮಾದ ಪಲ್ಗಳ ತುದಿಯಿಂ ।
ನಗುಕೂಗುತೊದಲ್ನುಡಿಗಳ
ಬಗೆವಗೆಯಿಂ ಮೆರೆದ ನಿನ್ನ ಬಾಲ್ಯದ ಮೊಗಮಂ ॥ ೪ ॥

ಭಗವತಿ ವಸುಂಧರೆ, ನಿಜವಾಗಿಯೂ ನಿನ್ನ ಮನಸ್ಸು ಕಠಿನವಾಗಿರುವುದು—

— ಉತ್ಪಲಮಾಲೆ —

ಆವಳ ಪೆರ್ಮೆಯಂ ತಿಳಿವರಾರೆನೆ ನೀನನಲಂ ಮುನೀಶ್ವರ
ರ್ಪಾವನೆಯಪ್ಪ ಗಂಗೆಯುಮರುಂಧತಿ ಭಾಸ್ಕರನಾ ವಸಿಷ್ಠನುಂ ।
ಭಾವಿಸರಿನ್ನು ಮಿಕ್ಕರೆನೆ ವಿದ್ಯೆಯುವಾಗ್ವಧುವಂತೆ ಪೆತ್ತುಮಾ
ದೇವಿಯನಾಕೆಗಿಂತುಟೊದವಿರ್ದಪ ಬನ್ನಮಿದಂ ಸಹಿಪ್ಪುದೇಂ? ॥ ೫ ॥

(ನೇಪಥ್ಯದಲ್ಲಿ)

ಪೂಜ್ಯೆಯರಾದ ಮಹಾದೇವಿಯರು ಇತ್ತಿತ್ತ ದಯಮಾಡಿಸಬೇಕು !

**ಜನಕ**— ಇದೇನು! ದಶರಥಮಹಾರಾಜನ ಕಂಚುಕಿಯು ದಾರಿ ತೋರಿಸುತ್ತಿರುವಂತೆಯೇ ಅರುಂಧತೀದೇವಿಯು ಚಿತ್ತೈಸುತ್ತಿರುವಂತಿದೆ. (ಎದ್ದು ನಿಂತುಕೊಂಡು) ಆದರೆ, ಇದಾರನ್ನು ಮಹಾದೇವಿಯೆಂದು ಸಂಬೋಧಿಸುತ್ತಿರುವನು. (ಸರಿಯಾಗಿ ನೋಡಿ) ಓಹೋ! ದಶರಥಮಹಾರಾಜನ ಪಟ್ಟದ ರಾಣಿಯಾದ ಕೌಸಲ್ಯೆಯು! ನನ್ನ ಪ್ರಿಯ ಸಖಿಯು! ನೋಡಿದೊಡನೆ, ಇವಳೇ ಕೌಸಲ್ಯಾದೇವಿಯೆಂದು ಗುರುತಿಸುವುದು ಕಷ್ಟಸಾಧ್ಯವು—

— ಮತ್ತೇಭವಿಕ್ರೀಡಿತ —

ಸಿರಿಯಿಂದಂ ಮೆರೆದಿರ್ದಳ್ಳೆ ದಶರಥೇಂದ್ರಾವಾಸದಲ್ಲೀಕೆ ತಾಂ
ಸಿರಿಯಾಗಿರ್ದಳೆನಲ್ಕದೇತಕುಪಮಾನಂ! ಮತ್ತೆ ದೌರ್ಭಾಗ್ಯದಿಂ।
ನೆರೆ ಸಂಕಷ್ಟಕೆ ಭಾಗಿಯಾಗಿ ಗುರುತೇನುಂ ತೋರದಂತಿರ್ಪಳೀ
ಪರಿಯಿಂ ದುಃಖವಿಕಾರದೊಳ್ನಿಯತಿಯ ಪ್ರಾಬಲ್ಯಮೆಂತಿರ್ಪುದೋ
॥ ೬ ॥

ಕಂ॥ ಅಂದೊಡಲಾಂತಮಹೋತ್ಸವ
ದಂದಂ ಮನ್ಮನಕೆ ತೋರ್ದಳಿವಳಂ ನೋಡ- ।
ಲ್ಕಿಂದಿದೊ ಗಾಯಂ ಕಾರಮು
ನೊಂದಿತ್ತೆನೆ ಮನಕಸಹ್ಯವೇದನೆಯಕ್ಕುಂ ॥ ೭ ॥

**ಅರುಂಧತಿ**—"ಮಹಾರಾಜ್ಞಿ, ನೀನೇ ಹೋಗಿ ಜನಕನನ್ನು ಸಂದರ್ಶಿಸಬೇಕು" ಎಂದು ಕುಲಗುರುಗಳ ಆದೇಶವು. ಅದನ್ನು ನಿನಗೆ ತಿಳಿಯ

ಪಡಿಸುವುದಕ್ಕಾಗಿ ನಾನು ಬಂದಿರುವೆನು. ಆದರೂ ನೀನೇಕೆ ಹೀಗೆ ಅಡಿಗಡಿಗೂ ಯೋಚಿಸುತ್ತಿರುವೆ?

ಕಂಚುಕಿ—ಮಹಾರಾಣಿಯವರು ಧೈರ್ಯತಂದುಕೊಂಡು ಪೂಜ್ಯರ ಆಜ್ಞೆಯನ್ನು ನೆರವೇರಿಸಬೇಕು ಎಂದು ವಿಜ್ಞಾಪಿಸಿಕೊಳ್ಳುವೆನು.

ಕೌಸಲ್ಯೆ—ತಾಯೆ, ಇಂತಹ ಕಾಲದಲ್ಲಿ ಜನಕರಾಯನನ್ನು ನೋಡಬೇಕೆಂದು ಆಲೋಚಿಸಿದಾಗ ದುಃಖಗಳೆಲ್ಲವೂ ಒಂದಾಗಿ ಬಂದು ಪಕ್ಕನೆ ಹಿಂಡಿಹಿಳಿದಂತಾದ ನನ್ನ ಹೃದಯವನ್ನು ಸರಿಪಡಿಸಿಕೊಳ್ಳಲಾರದೆ ಕಷ್ಟಪಡುತ್ತಿರುವೆನು.

ಅರುಂಧತಿ—ಅದರಲ್ಲಿ ಸಂದೇಹವಿಲ್ಲ—

ಕಂ॥ ಉರಿ ಬಂಧುವ್ಯಸನವುದನ
ವರತಂ ತಡೆಯಿಲ್ಲದಿದ್ದರ್ ಜಿನುಗಲ್ಪಳಿಯಂ ।
ಪರಮಾಪ್ತರ ಮುಂದದೆ ಸಾ—
ಸಿರತೊರೆಯೊಡಗೂಡಿ ಪರಿಗುಮಾಶೋಕರಸಂ ॥ ೮ ॥

ಕೌಸಲ್ಯೆ—ತಾಯೆ, ಜನಕಮಹಾರಾಜನಿಗೆ ಪ್ರಿಯಪುತ್ರಿಯೂ ನನಗೆ ವಾತ್ಸಲ್ಯದ ಸೊಸೆಯೂ ಆಗಿರುವ ಸೀತಾವಧುವು ಪರಿತ್ಯಕ್ತೆಯಾಗಿರಲು ನಾನಾತನ ಮುಖವನ್ನು ನೋಡುವುದೆಂತು?

ಅರುಂಧತಿ—

ಕಂ॥ ಜನಕಂ ವಂಶೋತ್ತಂಸಂ
ಸನುಮತದಿಂ ಸ್ತುತ್ಯಬಂಧುವೆಸಲೆ ನಿಮಗಂ ।
ಮುನಿಯಾಜ್ಞವಲ್ಕ್ಯನೀತನ
ಮನಮಂ ಬ್ರಹ್ಮೋಪದೇಶದಿಂ ತಣಿಸಿರ್ಪಂ ॥ ೯ ॥

ಕೌಸಲ್ಯೆ—ಸೀತಾಂಗನೆಯ ತಂದೆಯಾದ ವಿದೇಹಾಧಿಪನು ನಮ್ಮ ಮಹಾರಾಜರಿಗೆ ಜೀವದ ಗೆಳೆಯನಾಗಿದ್ದನು. ಈತನ ಸಂದರ್ಶನದಿಂದ ಹಿಂದಣ ವೈಭವಗಳೆಲ್ಲವನ್ನೂ ಸ್ಮರಿಸಿಕೊಳ್ಳುವೆನು. ಹಾ! ದೈವವೇ! ನಾನವೆಲ್ಲವನ್ನೂ ಕಳಕೊಂಡೆನಲ್ಲಾ!

**ಜನಕ**—(ಸಮೀಪಿಸಿ ಬಂದು) ಪೂಜ್ಯಳಾದ ಅರುಂಧತಿಯೇ, ವಿದೇಹಾಧಿಪತಿಯೂ ಸೀರಧ್ವಜನೆಂಬ ಅಭಿಧಾನವುಳ್ಳವನೂ ಆಗಿರುವ ನಾನು—

— ಚಂಪಕಮಾಲೆ —

ಪರಮಪವಿತ್ರಮಪ್ಪ ತಪಕೊಳ್ನಿಧಿಯಾದೊಡಮಾ ಗುರೂತ್ತಮ
ರ್ಗುರುವರನೆಂದು ಪೂಜಿಸಿದೊಡಂ ಋಷಿಪುಂಗವನಾ ವಸಿಷ್ಠನೇ ।
ಪರಮಪವಿತ್ರನೆಂದು ತಿಳಿದಿರ್ಪನೊ ಮುಂಗಳೆ ನಿನ್ನ ಸಂಗದಿಂ
ಕರುಣಿಸೆನುತ್ತುಪಾಸವೆಯರುಂಧತಿ ನಿನ್ನಡಿಗಳ್ಗೆ ಬಾಗುವೆಂ ॥ ೧೦ ॥

**ಅರುಂಧತಿ**—ಜನಕರಾಯನೆ, ನಿನಗೆ ಶಾಶ್ವತವಾದ ಬ್ರಹ್ಮಜ್ಯೋತಿಯು ಸಾಕ್ಷಾತ್ಕಾರವಾಗಲಿ! ಅಷ್ಟು ಮಾತ್ರವಲ್ಲದೆ, ಅಂತರಿಕ್ಷದಲ್ಲಿ ಬೆಳಗುತ್ತಿರುವ ಭಗವಾನ್ ಭಾಸ್ಕರನು ನಿನ್ನ ಅಂತರಂಗವನ್ನು ಬೆಳಗಿಸುತ್ತಿರಲಿ!

**ಜನಕ**—ವಯೋವೃದ್ಧನಾದ ಗೃಷ್ಟಿಯೆ, ಪ್ರಜಾಪಾಲಕನ ಮಾತೆಯಾದ ಈಕೆಗೆ ಆರೋಗ್ಯವಷ್ಟೆ?

**ಕಂಚುಕಿ**— (ಸ್ವಗತಂ) ನಿಜಕ್ಕೂ ಅತಿನಿಷ್ಠುರವಾಗಿ ನಿಂದಿತರಾದೆವು. (ಪ್ರಕಾಶಂ) ರಾಜರ್ಷಿಯೇ, ಆ ಕೋಪದ ಮೂಲಕವೇ ಬಹುಕಾಲದಿಂದಲೂ ತೊರೆದ ರಾಮದರ್ಶನವುಳ್ಳವಳೂ ಅತ್ಯಂತ ಖಿನ್ನಳೂ ಆಗಿರುವ ದೇವಿಯನ್ನು ಮತ್ತೂ ಕೊರಗಿಸುತ್ತಿರುವುದು ಸರಿಯಲ್ಲ! ಅಂದು ಆ ದ್ವೀಪಾಂತರದಲ್ಲಿ ಸೀತಾದೇವಿಗೆ ನಡೆದ ಅಗ್ನಿಪರೀಕ್ಷೆಯ ವಿಚಾರವಾಗಿ ನಂಬಿಕೆಯಿಲ್ಲದ ಪ್ರಜೆಗಳು ಆಕೆಯ ಪರವಾಗಿ ಅಸಹ್ಯವಾದ ಅಪವಾದವನ್ನು ಹಬ್ಬಿಸಿದರು. ಅದನ್ನು ಸಹಿಸಲಾರದೆ ರಾಮಚಂದ್ರನು ಅಂತಹ ಘೋರಕರ್ಮವನ್ನೆಸಗಿದನು. ಆದರೆ, ಅದು ನಿಜವಾಗಿಯೂ ಮುಂದೆ ನಿರಂತರವಾದ ವ್ಯಸನವನ್ನು ಉಂಟುಮಾಡಲಿಕ್ಕಿರುವ ಯಾವುದೋ ಒಂದು ದುರ್ದೈವದ ಪ್ರಭಾವವಲ್ಲದೆ ಬೇರಿಯಲ್ಲ.

**ಜನಕ**—(ಕೋಪದೊಡನೆ) ಏನು! ಅಗ್ನಿಪರೀಕ್ಷೆಯೆ? ನಮ್ಮ ಪುತ್ರಿಯಾದ ಸೀತೆಯನ್ನು ಪರೀಕ್ಷಿಸುವುದಕ್ಕೆ ಅಗ್ನಿಯು ಎಷ್ಟರವನು? ರಾಮನಿಂದ ಅವಮಾನಹೊಂದಿರುವ ನಮ್ಮನ್ನು ಅಂತಹ ಪುರಜನರು ಮತ್ತೂ ಅವಮಾನಗೊಳಿಸುತ್ತಿರುವರಲ್ಲಾ!

**ಅರುಂಧತಿ**—(ನಿಟ್ಟುಸಿರೊಡನೆ) ಈ ಮಾತು ಸರಿಯಾದುದು. ಘುಗಳಾಗಿರುವ ಸೀತೆಯನ್ನು ಕುರಿತು "ಅನಲ! ಅನಲ" ಎಂಬ ಅಕ್ಷರ ಗಳು ಲಘುಗಳೇ ಸರಿ "ಸೀತಾ" ಎಂಬ ಗೌರವಯುಕ್ತಗಳಾದ ಅಕ್ಷರಗಳೇ ಮನಸ್ಸಿಗೆ ಪರಿಪೂರ್ಣವಾದ ತೃಪ್ತಿಯನ್ನು ಉಂಟುಮಾಡುವುವು. ಆದುದರಿಂದಲೇ ನನಗೆ ನೀನು—

**ಕಂ॥** ತರಳೆಯೆ ಶಿಷ್ಯಳೆ ನೀನೆನ
ಗಿರಲುಂ ನಿನ್ನಯ ವಿಶುದ್ಧಿಗಾಂ ಮಣಿದಿರ್ಪೆಂ ।
ಧರೆಯೊಳ್ಪೂಜ್ಯತೆಗೆ ಕತಂ
ವರಗುಣಮಲ್ಲದೆ ವಯಸ್ಸುಲಿಂಗಗಳಲ್ಲಂ ॥ ೧೧ ॥

**ಕೌಸಲ್ಯೆ**—ಆಹಾ! ಹೃದಯಭೇದಕಗಳಾದ ವೇದನೆಗಳನ್ನು ಸಹಿಸಲಾರೆನು. (ಎಂದು ಮೂರ್ಛೆಹೊಂದುವಳು).

**ಜನಕ**—ಹಾ ಕಷ್ಟವೇ! ಇದೇನು?

**ಅರುಂಧತಿ**—ರಾಜರ್ಷಿಯೆ, ಬೇರೇನು—

— ಚಂಪಕಮಾಲೆ —

ಜನಪತಿಯಾಸುಖಂ ಶಿಶುಜನಂಗಳಿರಂ ದಿವಸಂಗಳಂದಿನಂ
ಬಿನಿತುಮನೊರ್ಮೆಯೇ ನೆನೆದು ನಿನ್ನಯ ದರ್ಶನದಿಂದೆ ಸಾಧ್ವಿ ಮು- ।
ಶ್ರೀನಿವಿರಿದೀ ವಿಪಾಕದೊಳೆ ಬೆಂದು ವಿಮೂರ್ಛಿತೆಯಾದಳೆಂಬುದಂ
ನೆನೆಯೆ ಪುರಂಧ್ರಿಮಾನಸಮೆ ಪುಷ್ಪಸುಕೋಮಲಮಿರ್ಪುದೆಂದಿಗುಂ
॥ ೧೨ ॥

**ಜನಕ**—ಆಹಾ! ಕಷ್ಟವೇ! ಬಹುಕಾಲದ ಮೇಲೆ ನೋಡಿದ ದಶರಥಮಹಾರಾಜನ ಧರ್ಮಪತ್ನಿಯನ್ನು ನಾನಿಂದು ಶತ್ರುಭಾವದಿಂದ ನೋಡುತ್ತಿರುವೆನು ಎಂಬುದರಿಂದ ನನ್ನಂತಹ ಘಾತುಕರು ಲೋಕದಲ್ಲಿಲ್ಲ. ಏನಗಾದರೋ ಆ ದಶರಥಮಹಾರಾಜನು—

— ಮಹಾಸ್ರಗ್ಧರೆ —

ಅವನೇ ಸಂಬಂಧಿ ಮತ್ತಿನ್ನವನೆ ಗೆಳೆಯನುಂ ಚಿತ್ತಮುಂ ನೋಡೆ ತಾನಿ
ನ್ನವನೇ ಸಾಕ್ಷಾನ್ಮುದಂ ತಾನವನೆ ಬರ್ದುಕಿನಲ್ಲಿರ್ಪ ಬಿದೂಟಮುಂ ತಾ।

ನವನೇ ಜೀವಂ ಶರೀರಂ ಪರಿಕಿಸಲವನೇ ನೋೞ್ಪೊಡಾಧಾರಮೆಲ್ಲ
ಕ್ಕವನೆನ್ನಲ್ ಶ್ರೀಮಹೇಂದ್ರೋಪಮದಶರಥನೇ ಎನ್ನಸರ್ವಸ್ವಮಿರ್ದಂ
॥ ೧೩ ॥

ಇವಳೇ ಆ ಕೌಸಲ್ಯಾದೇವಿಯಲ್ಲವೆ—

ಕಂ॥ ಪುಸಿಮುನಿಸು ಪ್ರಸನ್ನತೆಯಿರ
ಲೆಸಕಂ ಜನಕಂಗೆಯೆಂದು ದಂಪತಿಗಳಿರಲ್ ।
ಪೊಸವಗೆಯಿಂದಂ ಮೆರೆಯೆನೆ!
ಉಸಿಕನದಂ ಸ್ಮರಿಸಲಿಂದು ದಹಿಪುದು ಚಿತ್ತಂ ॥ ೧೪ ॥

ಅರುಂಧತಿ— ಕಷ್ಟವೇ! ನಿಶ್ವಾಸವು ತಡೆದಿರುವುದರಿಂದ ಹೃದ
ಯವು ಸ್ತಬ್ಧವಾಗಿರುವುದು.

ಜನಕ— ಹಾ! ಪ್ರಿಯ ಸಖಿಯೇ! (ಎನ್ನುತ್ತ ಕಮಂಡಲುಜಲವಮ
ಪ್ರೋಕ್ಷಿಸುವನು)

ಕಂಚುಕಿ—

ಕಂ॥ ಬಿದಿ ಗೆಳೆಯನ ತೆರದಿಂದಂ
ಮೊದಲನುಕೂಲದೊಳಿರುತ್ತೆ ಸುಖಮಂ ಕುಡುಗುಂ ।
ಅದೆ ಮರಳುತ್ತುಂ ದುಃಖಮ
ನೊದವಿಸಿ ಪೀಡಿಪುದು ಬಿಡದೆ ಬಲ್ಮೆಯಿನಕಟಾ ॥ ೧೫ ॥

ಕೌಸಲ್ಯೆ— (ಮೆಲ್ಲಮೆಲ್ಲಗೆ ಸಮಾಧಾನಹೊಂದಿ) ಹಾ ಮಗಳೆ ಜಾನಕಿ!
ನೀನೆಲ್ಲಿರುವೆ? ಮದುವೆಯ ಮಂಗಳಸ್ನಾನವೇ ಮೊದಲಾದುವುಗಳ
ಮೂಲಕ ಉಂಟಾದ ಹೊಸಬಗೆಯ ಕಾಂತಿಯಿಂದ ಶೋಭಿತವೂ, ಪರಿ
ಶುದ್ಧವಾದ ಮಂದಹಾಸದಿಂದ ಮಂಡಿತವೂ ಆದ ನಿನ್ನ ಮುಖಕಮಲವು
ನನ್ನ ಸ್ಮರಣೆಗೆ ಬರುತ್ತಿದೆ. ಮಗಳೇ, ಬೆಳ್ದಿಂಗಳ ಬೆಳಗಿನಂತೆ ಸುಂದರ
ಗಳಾದ ನಿನ್ನ ಅಂಗಗಳಿಂದ ನನ್ನ ಮಡಿಲನ್ನು ಇನ್ನೊಮ್ಮೆ ಅಲಂಕರಿಸು
ವವಳಾಗು. ಮಹಾರಾಜರು ಯಾವಾಗಲೂ ನಿನ್ನಲ್ಲಿರುವ ಅಕ್ಕರೆಯಿಂದ
"ಇವಳು ರಘುವಂಶ ಶ್ರೇಷ್ಠರಿಗೆ ಸೊಸೆಯು! ಆದರೆ, ಜನಕನ ಮಗಳಾ

ಗಿರುವುದರಿಂದ ನಮಗೆ ಮಗಳೇ ಆಗಿರುತ್ತಾಳೆ" ಎಂದು ನಿನ್ನ ವಿಷಯ ವಾಗಿ ಹೇಳುತ್ತಿದ್ದರಲ್ಲಾ!

**ಕಂಚುಕಿ**— ದೇವಿಯು ಹೇಳಿದಂತೆಯೇ ಸರಿ—

ಕಂ॥ ಮಕ್ಕಳೊಳೈವರೊಳೊಗುಮಿಗೆ
ಯಕ್ಕರೆಯರಸಂಗೆ ರಾಮನಲ್ಲೆನೆ ಸೊಸೆಯರ್ ।
ತಕ್ಕಂತಿರಲಾ ನಾಲ್ವರೊ
ಳಕ್ಕರೆಯಿಂ ಶಾಂತೆಯಂತೆ ಸೀತೆಯೆ ಸುತೆಯೈ ॥ ೧೬ ॥

**ಜನಕ**— ಪ್ರಿಯಮಿತ್ರನಾದ ದಶರಥಮಹಾರಾಜನೆ, ಹೌದು. ಹಾಗೆಯೇ ನೀನು ಎಲ್ಲಾ ಬಗೆಯಿಂದಲೂ ನನಗೆ ಹೃದಯಂಗಮನಾಗಿದ್ದೆ. ಅಂತಹ ನಿನ್ನನ್ನು ನಾನು ಮರೆಯುವುದುಂಟೆ?

— ಮಹಾಸ್ರಗ್ಧರೆ —

ಧರೆಯೊಳ್ಕನ್ಯಾಪಿತಂ ತನ್ನಳಿಯನ ಪ್ರಿಯಸಂಬಂಧಿಯಂ ಪೂಜಿಸುತ್ತಿ
ರ್ಪಿರವೈ! ನೀನೆನ್ನನೆಂದುಂ ವ್ಯತಿಕರಮೆನೆ ಸಂಪೂಜಿಸುತ್ತಿರ್ದೆಯಲ್ತೇ ।
ಅರಸಾ! ದುರ್ದೈವದಿಂದಂ ಮೃತನೆನಿಸಿದೆಯೋ! ಸೀತೆಯುಂ ಪೋದಳೇನೀ
ನರಕಂಪೋಲ್ದುರ್ವಿಯಿಂದೆನ್ನಸುತೊಲಗದೆಮಾಣ್ದಿರ್ಪುದೇಕೋಸು
ಡೆನ್ನಂ ॥ ೧೭ ॥

**ಕೌಸಲ್ಯೆ**— ಮಗಳೇ ಜಾನಕಿ, ನಾನೇನು ಮಾಡಲಿ? ದೃಢವಾದ ವಜ್ರಸರಿಗೆಯಿಂದ ಬೆಸುಗೆಹಾಕಿದಂತೆ ನಿಶ್ಚಲವಾಗಿರುವ ಈ ಜೀವನವು ಮಂದಭಾಗಿನಿಯಾದ ನನ್ನನ್ನು ಬಿಟ್ಟುಹೋಗುವುದಿಲ್ಲವಲ್ಲ!

**ಅರುಂಧತಿ**— ಮಹಾರಾಜ್ಞಿಯೆ, ಸಮಾಧಾನ ತಂದುಕೊ! ಹೀಗೂ ಕಣ್ಣೀರು ಸುರಿಸುವುದುಂಟೆ? ಸಮಯವಿಶೇಷದಲ್ಲಾದರೂ ಅದನ್ನು ತಡೆದುಕೊಳ್ಳಬೇಡವೆ? "ದೈವಗತಿಯು ಹಾಗೆಯೇ ಆಗಬೇಕಾದುದರಿಂದ ಅದನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ಆದರೂ ಸೀತಾಪರಿತ್ಯಾಗವು ಶುಭಪರ್ಯವಸಾನವುಳ್ಳದ್ದಾಗುವುದು" ಎಂಬುದಾಗಿ ನಿಮ್ಮ ಕುಲಗುರು ಗಳು ಋಷ್ಯಶೃಂಗಾಶ್ರಮದಲ್ಲಿ ಹೇಳಿದ ಮಾತನ್ನೂ ಮರೆತುಬಿಡುವುದೆ?

ಕೌಸಲ್ಯೆ—ಪೂಜ್ಯಳೆ, ಭಗ್ನಮನೋರಥೆಯಾದ ನನಗೆ ಶುಭಪರ್ಯವ ಸಾನದಲ್ಲಿ ಆಶೆಯೆಂದರೇನು ?

ಅರುಂಧತಿ—ರಾಜಪತ್ನಿಯೆ, ನಿಮ್ಮ ಕುಲಗುರುಗಳು ಅಸತ್ಯವಾದಿ ಗಳೆಂದು ತಿಳಿಯುವೆಯೇನು? ಕ್ಷತ್ರಿಯಕುಲಸಂಜಾತೆ, ನೀನೆಂದಿಗೂ ಹಾಗೆ ತಿಳಿದುಕೊಳ್ಳಲಾಗದು—

ಕಂ॥ ಅರಿಯಲ್ ಬ್ರಹ್ಮಜ್ಞಾನಿಗ
ಳೊರೆದುದರೊಳ್ ಸಂಶಯಿಪ್ಪ ಕಾರಣವಿಲ್ಲಂ ।
ಸಿರಿಯಿರ್ಪಳವರ ವಾಣಿಯೊ
ಳೊರೆಯರವರ್ವಿಪ್ಲುತಾರ್ಥವಚನಮನೆಂದುಂ ॥ ೧೮ ॥

(ನೇಪಥ್ಯದಲ್ಲಿ ಕಲಕಲವಾಗುವುದು. ಎಲ್ಲರೂ ಅದನ್ನು ಕೇಳುವಂತೆ ಅಭಿನಯಿಸುವರು)

ಜನಕ—ಓಹೋ! ಇದು ಅನಧ್ಯಯನವೆಂದು ತಡೆಯಿಲ್ಲದೆ ವಿಹರಿ ಸುತ್ತಿರುವ ಬಟುಗಳ ಕೋಲಾಹಲವು.

ಕೌಸಲ್ಯೆ—ಬಾಲ್ಯವೆಂಬುದು ಬಹುಸುಖಪ್ರದವು. (ಸರಿಯಾಗಿ ನೋಡಿ) ಈ ವಟುಗಳ ನಡುವೆ ಮಂಗಳಾಂಗನಾದ ರಾಮಚಂದ್ರನಂತೆ ದೃಢಸುಂದರಕೋಮಲಗಳಾದ ಅವಯವಗಳಿಂದ ಒಪ್ಪುತ್ತ ನಮ್ಮ ನೋಟಗಳಿಗೆ ಹಬ್ಬವನ್ನು ಉಂಟುಮಾಡುತ್ತಿರುವ ತರಳನು ಯಾವನಾಗಿರ ಬಹುದೊ?

ಅರುಂಧತಿ—(ಸಂತೋಷಕುತೂಹಲಗಳೊಡನೆ ಸ್ವಗತಂ) ಗಂಗಾ ದೇವಿಯು ನನ್ನೊಡನೆ ಹೇಳಿದ ಕರ್ಣಾಮೃತವಾದ ರಹಸ್ಯದ ಅರ್ಥವು ಇದೇ ಎಂಬುದರಲ್ಲಿ ಸಂದೇಹವಿಲ್ಲ. ಆದರೆ, ಆಯುಷ್ಮಂತರಾದ ಆ ಕುಶಲವರಲ್ಲಿ ಇವನಾವನೆಂದು ಮಾತ್ರ ತಿಳಿಯದು. (ಪ್ರಕಾಶಂ)

— ಮತ್ತೇಭವಿಕ್ರೀಡಿತ —

ಇವನಾವಂ ವಟುವೃಂದದಲ್ಲಿ ಮೆರೆದಪ್ಪಂ ಭಾವುಕಂ ಕಾಕಪ–
ಕ್ಷವಿಭೂಷಂ ವಿಕಚೋತ್ಪಲದ್ಯುತಿ ವಿರಾಜನ್ಮೂರ್ತಿ ನೋಡಲ್ಕೆ ರಾ– ।

ಘವನೇ ತಾಂ ಮರಲ್ದುಂ ಕುಮಾರಕನೆನಲ್ಬಂದಿರ್ಕುಮೆಂಬಂದದಿಂ
ನವತಾರುಣ್ಯದೆ ಶೋಭಿಪಂ ನಯನಪೀಯೂಷಾಂಜನಂ ಬಾಲಕಂ ॥೧೯॥

**ಕಂಚುಕಿ**— ಇವನು ಕ್ಷತ್ರಿಯಬ್ರಹ್ಮಚಾರಿಯೆಂದು ತಿಳಿಯುವುದು.

**ಜನಕ**— ನಿಜಕ್ಕೂ ಹಾಗೆಯೇ ಸರಿ. ನೋಡಲೀಬಾಲಕನ—

— ಶಾರ್ದೂಲವಿಕ್ರೀಡಿತ —

ಬೆನ್ನೊಳ್ತೋರ್ಪುದು ಪಕ್ಷಶೋಭಿತಕಲಂಬಾಕೀರ್ಣತೂಣೀಯುಗಂ
ಕೆನ್ನಂ ಭಸ್ಮಪವಿತ್ರವಕ್ಷದೊಳಿದೋ ಪೊರ್ದಿರ್ಪ ಕೃಷ್ಣಾಜಿನಂ ।
ಇನ್ನುಂ ಮೌರ್ವಕಮೇಖಲಾವೃತದ ಮಾಂಜಿಷ್ಠಾಂಶುಕಂ ರಂಜಿಸು
ತ್ತಿನ್ನೇಂ ಪಿಪ್ಪಲದಂಡಚಾಪಜಪಮಾಲಾಯುಕ್ತಮುಂ ಹಸ್ತಮುಂ ॥೨೦॥

ಪೂಜ್ಯಳಾದ ಅರುಂಧತಿಯೇ, ಈತನ ವಿಚಾರವೇನಾದರೂ ತಿಳಿದಿರುವುದೆ?

**ಅರುಂಧತಿ**— ಈ ಆಶ್ರಮಕ್ಕೆ ನಾವು ಹೊಸಬರಾಗಿರುವೆವು.

**ಜನಕ**— ಪೂಜ್ಯನಾದ ಗೃಷ್ಟಿಯೆ, ನಮ್ಮ ಕುತೂಹಲವು ವಿಶೇಷ ವಾಗಿರುವುದರಿಂದ ನೀನು ಬೇಗನೆ ಹೋಗಿ ವಾಲ್ಮೀಕಿಮುನಿಯೊಡನೆ ಈತನ ವಿಷಯವಾಗಿ ಕೇಳಬೇಕು. ಅಷ್ಟುಮಾತ್ರವಲ್ಲದೆ ಆ ಬಾಲಕನ ಬಳಿಗೆ ಹೋಗಿ ಕೆಲವುಂದಿ ವಯೋವೃದ್ಧರು ನಿನ್ನನ್ನು ಕಾಣಲು ಬಯಸು ತ್ತಿದ್ದಾರೆ ಎಂದು ತಿಳಿಸುವವನಾಗು.

**ಕಂಚುಕಿ**— ಪೂಜ್ಯರು ಹೇಳಿದಂತಾಗಲಿ. (ಎಂದು ಹೊರಟು ಹೋಗುವನು)

**ಕೌಸಲ್ಯೆ**— ರಾಜರ್ಷಿಯೆ, ನಿನ್ನ ವಿಚಾರವೇನು; ಹಾಗೆ ಹೇಳಿ ಕಳುಹಿದರೆ ಬಾಲಕನಿಲ್ಲಿಗೆ ಬರಬಹುದೊ? ಬರಲಾರನೊ?

**ಜನಕ**— ಅಂತಹ ರೂಪಸಂಪತ್ತು ವಿನಯವನ್ನು ಬಿಟ್ಟಿರುವು ದಿಲ್ಲವಷ್ಟೆ!

**ಕೌಸಲ್ಯೆ**—(ಸರಿಯಾಗಿನೋಡಿ) ರಾಜರ್ಷಿಯೆ, ಆ ತರಳನು ವಿನಯ ದಿಂದಲೇ ಗೃಷ್ಟಿಯ ಮಾತನ್ನು ಆಲಿಸಿ ಸಮಾನವಯಸ್ಕರಾದ ತರಳರನ್ನು ಬಿಟ್ಟು ಕೂಡಲೆ ಈ ಕಡೆಗಾಗಿ ಹೊರಟು ಬಂದನಲ್ಲ!

**ಜನಕ**—(ಸರಿಯಾಗಿ ಭಾವಿಸಿ ನೋಡಿ) ಆಹಾ! ಇದೇನು!

— ಚಂಪಕಮಾಲೆ —

ಗುರುತರವಿಕ್ರಮಾದಿಗುಣಜಾಲಗಭೀರನೆನಲ್ಕಿದಗ್ಧರಿಂ
ಪರಿಕಿಸಲಪ್ಪೊಡಂ ವಿನಯದಿಂದತಿಶೀತಲನೀ ಕುಮಾರಕಂ।
ಬರಸೆಳೆದಪ್ಪನೆನ್ನ ವ್ಯಸನದಿಂ ಮರವಟ್ಟೊಡವೆನ್ನ ಚಿತ್ತಮಂ
ಪರಿಲಘುಲೋಹಕಾಂತಮದು ತಾನಯಮಂ ಸೆಳೆವಂತೆ ಗಾಢದಿಂ ॥೨೧॥

**ಲವ**—(ಪ್ರವೇಶಿಸಿ) ಈ ಮಹಾತ್ಮರು ನನಗೆ ಪರಿಪೂಜ್ಯರು. ಆದರೂ, ಅವರ ಕುಲಗೋತ್ರಗಳೊಂದನ್ನೂ ತಿಳಿಯದೆ ನಾನು ಹೇಗೆ ತಾನೇ ಅವರನ್ನು ಅಭಿವಾದಿಸಿಕೊಳ್ಳಲಿ? (ಯೋಚಿಸಿ) ವಿನೀತನಾಗಿರಬೇಕೆಂದು ಹಿರಿಯರು ಹೇಳುತ್ತಿದ್ದುದನ್ನು ಕೇಳಿರುವೆನು. (ಎಂದು ವಿನಯದೊಡನೆ ಅವರ ಸಮೀಪಕ್ಕೆ ಹೋಗಿ) ಲವನೆಂಬ ನಾಮದೇಯವುಳ್ಳ ನಾನು ಹಿರಿಯರಾದ ನಿಮ್ಮೆಲ್ಲರಿಗೂ ತಲೆವಾಗಿ ನಮಸ್ಕರಿಸಿಕೊಳ್ಳುವೆನು.

**ಅರುಂಧತೀಜನಕರು**— ಮಂಗಳಾಂಗನೆ, ಆಯುಷ್ಮಂತನಾಗಿ ಬಾಳು!

**ಕೌಸಲ್ಯೆ**—ಕುಮಾರಕನೆ ಚಿರಂಜೀವಿಯಾಗು!

**ಅರುಂಧತಿ**—ಮಗುವೆ, ಇತ್ತ ಬಾ! (ಎಂದು ಕರೆದು ಅವನನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು ಸ್ವಗತಂ) ಭಾಗ್ಯವಶದಿಂದ ಈಗ ನನ್ನ ಉತ್ಸಂಗವು ಮಾತ್ರವಲ್ಲದೆ ಮನೋರಥವೂ ಪರಿಪೂರ್ಣವಾಯಿತು.

**ಕೌಸಲ್ಯೆ**—ಮಗು, ನೀನು ನನ್ನ ಬಳಿಗೂ ಬರಲಾರೆಯಾ? (ಎಂದು ಹೇಳುತ್ತ ಅವನನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು ಸ್ವಗತಂ) ಆಹಾ! ಈ ಬಾಲಕನು ನೂತನವಾಗಿ ವಿಕಸಿತವಾದ ನೀಲೋತ್ಪಲದಂತೆ ಶ್ಯಾಮಲಸ್ನಿಗ್ಧವಾಗಿರುವ ದೇಹದಿಂದ ಮಾತ್ರವಲ್ಲದೆ ಕಮಲಕೇಸರಗಳ ಮೆಲ್ಲುವಿಕೆಯಿಂದ ಕಷಾಯಿತಕಂಠಗಳಾದ ಹಂಸಗಳ ರವದಂತೆ ಬಹುದೀರ್ಘವಾದ ಸ್ವರದಿಂದಲೂ ರಾಮಭದ್ರನನ್ನೇ ಹೋಲುತ್ತಿರುವನಲ್ಲ! ಅಷ್ಟು ಮಾತ್ರವಲ್ಲದೆ ಪರಿಣತವಾದ ಕಮಲದ ಗರ್ಭಪ್ರದೇಶದಂತೆ ನಿಬಿಡವಾಗಿರುವ ಈತನ ಶರೀರಸ್ಪರ್ಶವೂ ರಾಮಚಂದ್ರನ ಶರೀರಸ್ಪರ್ಶ

ದಂತೆಯೇ ಮನಸ್ಸನ್ನು ತೃಪ್ತಿಗೊಳಿಸುತ್ತಿದೆಯಲ್ಲ! (ಪ್ರಕಾಶಂ) ಮಗುವೇ, ನಿನ್ನ ಮುಖಪುಂಡರೀಕವನ್ನು ನೋಡುವೆನು. (ಎಂದು ಚುಬುಕವನ್ನು ಹಿಡಿದು ಮೇಲಕ್ಕೆ ಎತ್ತಿ ಭಾವಿಸಿ ನೋಡಿ ಕಂಬನಿಯೊಡನೆ) ರಾಜರ್ಷಿಯೆ, ಸರಿಯಾಗಿ ನೋಡಿದರೆ ಇದು ನಮ್ಮ ಸೀತೆಯ ಮುಖವನ್ನೇ ಹೋಲುತ್ತಿರುವುದಲ್ಲವೆ?

**ಜನಕ**— ನಿಜವಾಗಿಯೂ ಹಾಗೆಯೇ ತೋರುವುದು.

**ಕೌಸಲ್ಯೆ**— ರಾಜರ್ಷಿಯೆ, ನನ್ನ ಮನಸ್ಸು ಹುಚ್ಚುಗಟ್ಟಿ ಎತ್ತೆತ್ತಲೋ ತೊಳಲುತ್ತಿದೆ.

**ಜನಕ**— — ಮತ್ತೇಭವಿಕ್ರೀಡಿತ —

ತನುಸಂಬಂಧದ ಪೋಲ್ಕೆಯೇನಮಮ! ಸೀತಾರಾಮರಾ ಛಾಯೆ ನೂ-
ತನತಾರುಣ್ಯಮನಾಂತು ಬಂದುದೆನೆ ರಾರಾಜಿಪ್ಪನೀಬಾಲಕಂ ।
ವಿನಯಂ ವಾಣಿ ಗುಣಾನುರೂಪಮನುಭಾವಂ ಕಾಂತಿಯಿಂತೆಲ್ಲಮುಂ
ನೆನೆಯಲ್ಕಂತೆಯೆ ದೇವಿ ಸ್ಮೆರಿಪನೆ ಹಾ! ಮಚ್ಚಿತ್ತಚಾಂಚಲ್ಯಮಂ ॥೨೨॥

**ಕೌಸಲ್ಯೆ**— ಮಗು, ನಿನಗೆ ಅಮ್ಮನಿರುವಳೆ? ತಂದೆಯನ್ನು ಸ್ಮರಿಸುವೆಯೇನು?

**ಲವ**— ಇಲ್ಲ! ಇಲ್ಲ!

**ಕೌಸಲ್ಯೆ**— ಆದರೆ ನೀನು ಯಾರ ಸಂಬಂಧಿಯು?

**ಲವ**— ಪ್ರಸಿದ್ಧನಾದ ವಾಲ್ಮೀಕಿಮುನಿಯ.

**ಕೌಸಲ್ಯೆ**— ಬಾಲಕನೆ, ಸ್ಪಷ್ಟವಾಗಿ ತಿಳಿಯುವಂತೆ ಹೇಳಬಹುದಲ್ಲ!

**ಲವ**— ಇಷ್ಟೇ ನನಗೆ ತಿಳಿದಿರುವುದು.

(ನೇಪಥ್ಯದಲ್ಲಿ)

ಸೈನಿಕರೆಲ್ಲರೂ ಕೇಳಿಕೊಳ್ಳಬೇಕು—"ವಾಲ್ಮೀಕಿ ಮಹಾಮುನಿಯ ಆಶ್ರಮದ ಪರಿಸರದಲ್ಲಿ ನೀವಾರೂ ಸಂಚರಿಸಬಾರದು" ಎಂಬುದಾಗಿ ನಮ್ಮ ಚಂದ್ರಕೇತುರಾಯನ ಆಜ್ಞೆಯಾಗಿರುವುದು.

**ಅರುಂಧತೀಜನಕರು**— ರಾಮಚಂದ್ರನ ಯಜ್ಞೀಯಾಶ್ವದ ಬೆಂಬಲಕ್ಕಾಗಿ ಬಂದಿರುವ ಲಕ್ಷ್ಮಣಪುತ್ರನಾದ ಚಂದ್ರಕೇತುವನ್ನು ನೋಡಬಹುದಾದ ಕಾರಣ ನಮಗಿದು ಸುದಿನವೇ ಸರಿ.

**ಕೌಸಲ್ಯೆ**—ವತ್ಸನಾದ ಲಕ್ಷ್ಮಣನ ಕುಮಾರಕನು ಆಜ್ಞಾಪಿಸುತ್ತಿರುವನೆಂಬ ಅಮೃತಬಿಂದುಸುಂದರಗಳಾದ ಅಕ್ಷರಗಳೇ ಕೇಳಬರುತ್ತಿವೆಯಲ್ಲಾ!

**ಲವ**—ಪೂಜ್ಯನೆ, ಚಂದ್ರಕೇತುವೆಂಬವನಾವನು?

**ಜನಕ**—ದಶರಥಪುತ್ರರಾದ ರಾಮಲಕ್ಷ್ಮಣರನ್ನು ಬಲ್ಲೆಯೇನು?

**ಲವ**—ಅವರಲ್ಲವೆ ರಾಮಾಯಣದ ಕಥಾನಾಯಕರು?

**ಜನಕ**—ಹೌದು.

**ಲವ**—ಹಾಗಾದರೆ ನಾನು ಬಲ್ಲೆನು.

**ಜನಕ**—ಆ ಲಕ್ಷ್ಮಣನ ಪುತ್ರನೇ ಚಂದ್ರಕೇತುವು.

**ಲವ**—ಹಾಗಾದರೆ, ಊರ್ಮಿಳಾನಂದನನು; ಮಿಥಿಲಾಧಿಪನಾದ ರಾಜರ್ಷಿಯ ಮೊಮ್ಮಗನು.

**ಅರುಂಧತಿ**—(ನಕ್ಕು) ಓಹೋ! ಮಗುವಿಗೆ ರಾಮಾಯಣಕಥೆಯಲ್ಲಿ ಪ್ರಾವೀಣ್ಯವಿದೆ.

**ಜನಕ**—(ಯೋಚಿಸಿ) ಮಗುವೇ, ನಿನಗೆ ರಾಮಾಯಣದ ಕಥೆಯು ಸರಿಯಾಗಿ ತಿಳಿದಿರುವುದಾದರೆ ನೋಡೋಣ! ದಶರಥ ಮಹಾರಾಜನಿಗೆ ಯಾವ ಯಾವ ಪತ್ನಿಯರಲ್ಲಿ ಎಷ್ಟೆಷ್ಟು ಮಂದಿ ಮಕ್ಕಳು? ಅವರ ಹೆಸರೇನು?

**ಲವ**—ಆ ಕಥಾಭಾಗವನ್ನು ನಾವಾರೂ ಕೇಳಿಲ್ಲವಲ್ಲ!

**ಜನಕ**—ಕವಿಪುಂಗವನು ರಚಿಸಿಲ್ಲವೇನು?

**ಲವ**—ರಚಿಸಿರುವನು. ಆದರೆ, ಅದಿನ್ನೂ ಪ್ರಕಟವಾಗಿಲ್ಲ. ಅಷ್ಟು ಮಾತ್ರವಲ್ಲದೆ, ರಾಮಾಯಣದ ರಸವತ್ತಾದ ಕಥಾಭಾಗವೊಂದನ್ನು ಆರಿಸಿಕೊಂಡು ಉತ್ತಮವಾದ ದೃಶ್ಯಕಾವ್ಯವನ್ನೂ ಬರೆದಿರುವನು. ವಾಲ್ಮೀಕಿ ಮುನಿಯೀಗ ಸ್ವಹಸ್ತಲಿಖಿತವಾದ ಆ ನಾಟಕವನ್ನು ನೃತ್ಯಗೀತ ವಾದ್ಯಗಳಲ್ಲಿ

ಪ್ರಸಿದ್ಧನೂ ನಾಟ್ಯಶಾಸ್ತ್ರದ ಸೂತ್ರಧಾರನೂ ಆಗಿರುವ ಭರತಮುನಿಯ ಬಳಿಗೆ ಕಳುಹಿಸಿರುವನು.

ಜನಕ—ಯಾವ ಉದ್ದೇಶದಿಂದ?

ಲವ—ಭರತಮುನಿಯು ಅಪ್ಸರಸೆಯರ ಮೂಲಕ ಅದನ್ನು ಪ್ರಯೋಗಿಸಿ ತೋರಿಸುವನೆಂದು.

ಜನಕ—ಇದೆಲ್ಲವೂ ನಮಗೆ ಬಗೆಹರಿಯದ ಒಗಟಿನಂತೆ ತೋರುವುದು.

ಲವ—ಆ ಗ್ರಂಥದಲ್ಲಿ ಕವಿಯ ಆಸ್ಥೆಯು ಬಹಳವೆಂದೇ ಹೇಳಬೇಕು. ಯಾಕೆಂದರೆ, ಅದನ್ನು ಭರತಾಶ್ರಮಕ್ಕೆ ಕೊಂಡೊಯ್ಯಲು ಅನೇಕ ಮಂದಿ ಶಿಷ್ಯರನ್ನು ಕಳುಹಿದನು. ಆದರೂ ಪ್ರಮಾದವೇನೂ ಸಂಭವಿಸಬಾರದೆಂಬ ಜಾಗ್ರತೆಗಾಗಿ ಧನುರ್ಧರನಾದ ನನ್ನ ಸಹೋದರನನ್ನೂ ಅವರ ಸಂಗಡಲೇ ಹೋಗಬೇಕೆಂದು ಹೇಳಿಕಳುಹಿಸಿರುವನು.

ಕೌಸಲ್ಯೆ—ನಿನಗೆ ಸಹೋದರನೂ ಇರುವನೇನು?

ಲವ—ಹೌದು! ಪೂಜ್ಯನಾದ ಕುಶನೆಂಬವನು.

ಕೌಸಲ್ಯೆ—ಪೂಜ್ಯನೆಂದು ಹೇಳಿದುದರಿಂದ ಅಣ್ಣನೆಂದು ಹೇಳಿದ ಹಾಗಾಯಿತು.

ಲವ—ಹೌದು! ಪ್ರಸವಕ್ರಮದಿಂದ ಅವನೇ ಮೊದಲಿಗನು; ನಾನು ಅನಂತರದವನು.

ಜನಕ—ನೀವೇನು ಅವಳಿಮಕ್ಕಳೆ?

ಲವ—ಹೌದು.

ಜನಕ—ಮಗುವೆ, ರಾಮಾಯಣದ ಕಥೆಯು ಎಲ್ಲಿಯ ತನಕ ವಿಸ್ತರಿಸಿರುವುದೆಂದು ಹೇಳು.

ಲವ—ಪುರಜನರ ಅಪವಾದದಿಂದ ಉದ್ವಿಗ್ನನಾದ ರಾಜನು ಪರಿತ್ಯಾಗ ಮಾಡಿರಲು, ಆಸನ್ನವಾದ ಪ್ರಸವವೇದನೆಯಿಂದ ತಳಮಳಿಸುತ್ತಿದ್ದ ಯಜ್ಞಭೂಮಿಸಮುದ್ಭೂತೆಯಾದ ಸೀತಾದೇವಿಯನ್ನು ಘೋರಾರಣ್ಯ

ಷಲ್ಲಿ ಬಿಟ್ಟು ಲಕ್ಷ್ಮಣನು ಅಯೋಧ್ಯೆಗೆ ಮರಳಿದನು ಎಂದು ಮಾಗಿಯು ವುದು.

ಕೌಸಲ್ಯೆ—ಆಹಾ! ಮುದ್ದುಬೀರುವ ಮುಖವುಳ್ಳ ಮಗಳೇ, ಆ ವನಾಂತರದಲ್ಲಿ ಏಕಾಕಿನಿಯಾಗಿರಲು, ನಿನ್ನ ಶರೀರಕುಸುಮಕ್ಕೆ ದೈವ ದುರ್ವಿಲಾಸದ ಎಂತಹ ಪರಿಣಾಮವಾಯಿತೊ?

ಜನಕ—ಹಾ ವತ್ಸೆ! ಸೀತೆ!

ಕಂ॥ ಪರಿಭವದಿಂ ವನದಂತರ
ದಿರದಿಂ ಪರಿಪೂರ್ಣಗರ್ಭದಿಂ ನೀಂ ಮರುಗು ।
ತ್ತಿರೆ ಬಂದಸ್ರಪತತಿಯುಂ
ನಿರುಕಿಸುತುಂ ಬೆದರ್ದು ಜನಕನೆಂದೆಯೊ ಮಗಳೇ ॥೨೩॥

ಲವ—ಪೂಜ್ಯಳೆ, ಇವರಾರು?

ಅರುಂಧತಿ—ಇವಳೇ ಕೌಸಲ್ಯೆಯು; ಇವನೇ ಜನಕರಾಯನು.

(ಲವನು ಗೌರವವ್ಯಸನಕುತೂಹಲಗಳೊಡನೆ ನೋಡುತ್ತಿರುವನು)

ಜನಕ—ಆಹಾ ಪುರಜನರ ದೌಷ್ಟ್ಯವನ್ನು ಏನೆನ್ನಲಿ! ರಾಮ ಭದ್ರನ ದುಡುಕಿಗೆ ಮತ್ತೇನೆನ್ನಬೇಕು!

— ಮತ್ತೇಭವಿಕ್ರೀಡಿತ —

ಬಿಡದಿರ್ಪಾ ಕಡುಬನ್ನವೆಂಬ ಸಿಡಿಲಿಂತಾದೊರ್ಮೆಗೇ ಬೀಳಲೇಂ
ಸುಡದೇ ವೀಕ್ಷಿಸಿದೆನ್ನ ಕೋಪದುರಿ ವೇಣೀ ಚಾಪದಿಂ ಶಾಪದಿಂ ।

ಕೌಸಲ್ಯೆ—(ಹೆದರಿ ನಡುಗುತ್ತ) ಪೂಜ್ಯಳೆ, ಕುಪಿತನಾದ ರಾಜರ್ಷಿ ಯನ್ನು ಸಮಾಧಾನಗೊಳಿಸಿ ಕಾಪಾಡು! ಕಾಪಾಡು!

ಲವ—

ಕಂ॥ ಪರಿಭೂತರಾದ ಮಾನಿಗ
ಳುರಿಯದೆ ತಣಿವಂದವಲ್ತೆ ಪ್ರಾಯಶ್ಚಿತ್ತಂ ।

ಅರುಂಧತಿ—

ಅರಸನೆ ರಾಮನಪತ್ಯಂ
ಧರೆಯ ಜನರ್ದೀನರಲ್ತೆ! ಅವರಂ ಪೊರೆಯಾ ॥ ೨೪ ॥

**ಜನಕ—**

ತಡೆವೆಂ ಕೋಪಮನೀಗ ಚಿತ್ತಶಮದಿಂ ಮತ್ಪುತ್ರಕಂ ರಾಮನಂ
ಬೊಡೆ ವಿಪ್ರಾದಿಸಮಸ್ತಪೌರಗಣಮುಂ ಸಂರಕ್ಷಣೀಯಂ ಗಡಾ
॥ ೨೫ ॥

**ಬಟುಗಳು—**(ಸಂಭ್ರಾಂತರಾಗಿ ಪ್ರವೇಶಿಸಿ) ಓಹೋ! ಬಾಲಕನೇ, ಲವನೇ, ಕುದುರೆ! ಕುದುರೆ! ಎಂಬ ಚತುಷ್ಪಾದಜೀವಿಯೊಂದರ ಹೆಸರನ್ನು ಮಾತ್ರ ನಾವು ಕೇಳಿದ್ದೆವಷ್ಟೆ! ಅದನ್ನೀಗ ನಾವು ಕಣ್ಣಾರೆ ನೋಡಿದೆವು.

**ಲವ—**ನಾವು ವೇದವನ್ನು ಕಲಿಯುವಾಗ ಯಾಗದ ವಿವರಣೆಯ ಸಂದರ್ಭದಲ್ಲೂ ಯುದ್ಧಕಾಂಡದಲ್ಲೂ ಆಗಾಗ ಕುದುರೆಯೆಂಬ ಹೆಸರನ್ನು ಕೇಳಿಬಲ್ಲೆವು. ಅದೀಗ ಹೇಗಿರುವುದೆಂದು ತಿಳಿಸಿರಿ.

**ಬಟುಗಳು—**ಎಲೈ ಬಾಲಕನೆ—

— ಮಂದಾಕ್ರಾಂತ —

ನೋಡಲ್ಪುಚ್ಛಂ ಪಿರಿದದೆನಸುಂ ಪಿಂತೆ ನಿಚ್ಚಂ ಚಲಿಕ್ಕುಂ
ನೀಡಿರ್ಕುಂ ಕುತ್ತಿಗೆ ಮಿಗೆ ಶಫಂ ಪೋಳದೊಂದಾಗಿ ನಾಲ್ಕೇ।
ಕಾಡಿಂ ಪುಲ್ಮೇದಪುದದು ಶಕೃತ್ಪಿಂಡಮಾಮ್ರಪ್ರಮಾಣಂ
ನೀಡುಂ ತಾನಿಕ್ಕುತೆ ಸರಿಗುಮಾಂ ನೋಳ್ಪಮೇಂ ಬಣ್ಣಿಪಂದಂ ॥ ೨೬ ॥

(ಎಂದು ಹೇಳುತ್ತ ಕೃಷ್ಣಾಜಿನವನ್ನು ಹಿಡಿದೆಳೆಯುವರು

**ಲವ—** (ಅಶ್ವಾವಲೋಕನಕುತೂಹಲದಿಂದಲೂ ಗುರುಜನರಲ್ಲಿರುವ ವಿನಯದಿಂದಲೂ ಕೂಡಿದವನಾಗಿ) ಪೂಜ್ಯರೇ ನೋಡಿರಿ! ಬಲಾತ್ಕರಿಸುತ್ತಿರುವ ಗೆಳೆಯರು ನನ್ನನ್ನು ಬಿಡಲಾರರು. (ಎಂದು ಹೇಳುತ್ತ ತ್ವರೆಯಿಂದ ಹೊರಡಲಿಚ್ಛಿಸುವನು).

**ಅರುಂಧತೀಜನಕರು—** ಮಗುವೆ, ನಿನ್ನ ಕುತೂಹಲವನ್ನು ಪೂರೈಸಿಕೊ!

**ಕೌಸಲ್ಯೆ—** ಈ ಅರಣ್ಯದಲ್ಲಿ ಗೋಚರಿಸಿದ ಬಾಲಕನ ಮುಗ್ಧ ಸೌಂದರ್ಯಾಲಾಪಗಳ ಮೂಲಕ ನಾವೆಲ್ಲರೂ ಇಂದು ಸಂತೋಷ

ಹೊಂದಿದೆವು. ಪೂಜ್ಯಳಾದ ಅರುಂಧತಿಯೆ, ಆದರೇನು? ಆ ಮಗು ವನ್ನು ನೋಡಿದ ನನ್ನ ಬಗೆಯು ಏನನ್ನೋ ಕಳಕೊಂಡಂತೆ ತಳಮಳಿ ಸುತ್ತಿರುವುದು. ಆದುದರಿಂದ ನಾವು ಬೇಗನೆ ಇಲ್ಲಿಂದ ಮುಂದೆ ಹೋಗಿ ಓಡಿಹೋಗುತ್ತಿರುವ ಚಿರಂಜೀವಿಯನ್ನು ಬಿಡದೆ ನೋಡೋಣ.

ಅರುಂಧತಿ— ಇಷ್ಟರಲ್ಲೇ ಬಹುದೂರ ಸಾಗಿದ ಚಪಲನನ್ನು ನಾವು ಕಾಣುವುದೆಂತು?

ಕಂಚುಕಿ—(ಪ್ರವೇಶಿಸಿ) ಪೂಜ್ಯರೆ, ಆ "ಬಾಲಕನ ಸಕಲವೃತ್ತಾಂತವೂ ನಿಮಗೆ ಸಕಾಲದಲ್ಲೇ ತಿಳಿದು ಬರುವುದು" ಎಂದು ವಾಲ್ಮೀಕಿಮುನಿಗಳು ಅತಿಸಂಗ್ರಹವಾಗಿಯೇ ಉಪಸಂಹಾರಗೊಳಿಸಿದರು.

ಜನಕ—ಬಾಲಕನ ಉತ್ಪತ್ತಿಕ್ರಮವೇನೋ ಬಹುರಹಸ್ಯವಾಗಿರ ಬೇಕು. ಪೂಜ್ಯಳಾದ ಅರುಂಧತಿಯೆ, ಗೆಳತಿಯಾದ ಕೌಸಲ್ಯೆ, ಆರ್ಯ ಗೃಷ್ಟಿಯೆ, ನಾವೀಗಲೇ ಹೋಗಿ ಭಗವಂತನಾದ ವಾಲ್ಮೀಕಿಯನ್ನು ನೋಡೋಣ. (ಎಂದು ಅವರೆಲ್ಲರೂ ಹೋಗುವರು).

ಬಟುಗಳು— (ಪ್ರವೇಶಿಸಿ) ಕುಮಾರಕನೆ, ಆಶ್ಚರ್ಯಕರವಾದ ಪ್ರಾಣಿಯನ್ನು ನೋಡು.

ಲವ—ನೋಡಿದುದು ಮಾತ್ರವಲ್ಲದೆ, ವಿಷಯವನ್ನೂ ತಿಳಕೊಂಡೆನು. ಇದು ಯಜ್ಞೀಯಾಶ್ವವು.

ಬಟುಗಳು—ಅದು ಹೇಗೆ ತಿಳಿಯುವುದು?

ಲವ—ದಡ್ಡರೇ, ವೇದದಲ್ಲಿ ನೀವೂ ಯಜ್ಞಕಾಂಡವನ್ನು ಕಲಿತಿಲ್ಲ ವೇನು? ಅದರಲ್ಲಿ "ಕುದುರೆಯ ರಕ್ಷಕರಾಗಿ ಕವಚ, ದಂಡ, ತೂಣೀರ ಮೊದಲಾದ ಆಯುಧಗಳನ್ನು ಧರಿಸಿರುವ ನೂರು ನೂರು ಮಂದಿ ಭಟರು ಪ್ರತ್ಯೇಕ ಪ್ರತ್ಯೇಕವಾಗಿ ನಿಯಮಿತರಾಗಿ ಇರತಕ್ಕದ್ದು" ಎಂದು ಹೇಳಿದೆಯಷ್ಟೆ! ಈ ಸೇನೆಯಲ್ಲಿರುವವರೂ ಹಾಗೆಯೇ ಕಾಣುತ್ತಿದ್ದಾರೆ. ನಿಮಗೆ ನನ್ನ ಮಾತಿನಲ್ಲಿ ನಂಬಿಕೆಯಿಲ್ಲವಾದರೆ, ಹೋಗಿ ಅವರನ್ನೇ ಕೇಳಿರಿ.

**ಬಟುಗಳು**—ಅಯ್ಯಾ ಜನರೆ, ಕುದುರೆಯು ಹೀಗೆ ಊರಿಂದೂರಿಗೆ ಸಂಚರಿಸುವುದರ ಪ್ರಯೋಜನವೇನು?

**ಲವ**—(ಅಭಿಪ್ರಾಯಪೂರ್ವಕವಾಗಿ ಸ್ವಗತಂ) ಅಶ್ವಮೇಧವೆಂಬ ಮಹಾಯಜ್ಞವು ವೀರವರ್ಗವನ್ನು ಜಯಿಸತಕ್ಕ ವೀರಶ್ರೇಷ್ಠರಿಗೆ ವಿಕ್ರಮಾತಿಶಯದ ಒರೆಗಲ್ಲಾಗಿರುವುದು.

(ನೇಪಥ್ಯದಲ್ಲಿ)

**ಕಂ॥** ಬೀಗಿದ ಕರ್ಬುರಕುಲಮಂ
ನೀಗಿದ ಲೋಕೈಕವೀರರಾಮಂ ಸಮೆದಾ ।
ಯಾಗದ ಹಯಮಿದು ವಿಜಯಮ
ನಾಗಿಪ್ಪ ಪತಾಕೆ ವೀರಘೋಷಣೆ ಮತ್ತಂ ॥ ೨೭ ॥

**ಲವ**—(ಗರ್ವದಿಂದ) ವೀರರನ್ನು ಕೆರಳಿಸುವ ಅಕ್ಷರಗಳು ಕೇಳಿಸುತ್ತಿವೆಯಲ್ಲ!

**ಬಟುಗಳು**—ಹೇಳುವುದೇನು! ನಮ್ಮ ಲವನು ತೀಕ್ಷ್ಣಬುದ್ಧಿಯವನೇ ಸರಿ.

**ಲವ**—ಎಲ! ಎಲಾ! ಭಟರೆ, ನೀವು ಉಗ್ಗಡಿಸುತ್ತಿರುವುದೇನು? ಲೋಕದಲ್ಲಿ ಬೇರೆ ವೀರಕ್ಷತ್ರಿಯರಿಲ್ಲವೇನು?

(ಪುನಃ ನೇಪಥ್ಯದಲ್ಲಿ)

ಎಲ! ಎಲಾ! ರಾಜಾಧಿರಾಜನ ಮುಂದೆ ವೀರಕ್ಷತ್ರಿಯರಾರು?

**ಲವ**—ಮೂಢರೇ, ನಿಮಗೆ ಧಿಕ್ಕಾರವಿರಲಿ!

**ಕಂ॥** ಬಾರಿಪ ವೀರತೋರ್ಪರರಿ
ಮೀರಿದ ನುಡಿಗಿಂತದಾರ್ಬೆದರ್ವರೊ ಜಗದೊಳ್ ।
ಕ್ರೂರವ್ಯಾಹೃತಿಯಿಂದೇಂ?
ವೀರಪತಾಕೆಯನೆ ಸೆಳೆವೆನೀಗಳ್ನೋಡಿಂ ॥ ೨೮ ॥

**ಪುರುಷ**—(ಪ್ರವೇಶಿಸಿ ಕೋಪದೊಡನೆ) ಚಪಲನೆ, ಬಿಡು! ಬಿಡು! ನೀನು ಹೇಳಿದುದೇನು! ನೀನು ಬಾಲಕನಾದರೂ ನಿನ್ನ ಗರ್ವೋಕ್ತಿಗಳನ್ನು

ತೀಕ್ಷ್ಣಗಳಾದ ಶಸ್ತ್ರಧಾರೆಗಳು ಸಹಿಸಲಾರವೆಂಬುದನ್ನು ತಿಳಿದಿರುವೆಯೇನು? ಅತಿಪ್ರಚಂಡನಾದ ಚಂದ್ರಕೇತುವೆಂಬ ನಮ್ಮ ರಾಜಕುಮಾರನು ನೂತನವಾದ ಅರಣ್ಯದ ಸೊಬಗನ್ನು ನೋಡುವುದರಲ್ಲಿ ಲೀನನಾಗಿರುವನು. ಅವನಿಲ್ಲಿಗೆ ಬರುವುದರ ಮೊದಲೇ ನೀನು ಪೊದರುಗಳೊಳಗಿಂದ ಹಾದು ಹೋಗಿ ಪ್ರಾಣಾಪಾಯದಿಂದ ಪಾರಾಗು.

**ಬಟುಗಳು** — ಕುಮಾರಕನೇ ಲವನೇ, ಸಾಕು! ಸಾಕು! ನಮಗೆ ಆ ಕುದುರೆಯ ಗೊಡವೆಯೇ ಬೇಡ. ಸಾಲು ಸಾಲಾಗಿ ಬರುವ ಭಟರು ಧನುಷ್ಟಂಕಾರವೆಸಗುತ್ತ ಹೆದರಿಸುತ್ತಿರುವರಲ್ಲ! ನಮ್ಮ ಆಶ್ರಮವು ದೂರದಲ್ಲಿದೆ. ನಾಗಾಲೋಟದಿಂದ ಓಡಿಹೋಗೋಣ. ಬೇಗನೆ ಬಂದು ಬಿಡು.

**ಲವ** — (ನಕ್ಕು) ಏನೇನು! ಧನುಷ್ಟಂಕಾರವೆ? (ಎಂದು ಧನುಸ್ಸಿಗೆ ಹೆದೆಯೇರಿಸುತ್ತ)

— ಚಂಪಕಮಾಲೆ —

ವಿನಮಿತತುಂಗಕೋಟಿಗಳೆನಿಪ್ಪತಿತೀಕ್ಷ್ಣಕರಾಳದಂಷ್ಟ್ರದಿಂ
ಮುನಿದಸುಗೊಳ್ಳಲೆಂದಿರದೆ ಚಪ್ಪರಿಪಾ ಗುಣಜಿಹ್ವೆಯಿಂ ಕೃತಾಂ- ।
ತನ ಲಯವಕ್ತ್ರಮೆಂಬನಿತು ಭೀಕರದೀ ವರಚಾಪಮಧ್ಯದಿಂ
ಘನಮೆನೆ ಘರ್ಘರಧ್ವನಿಯೆ ಪೊಣ್ಮುಗೆ ವೈರಿವಿನಾಶಸೂಚಕಂ ॥ ೨೯ ॥

(ಎಂದು ಸ್ವೇಚ್ಛೆಯಿಂದ ಸುತ್ತುತ್ತ ಎಲ್ಲರೂ ಹೊರಟು ಹೋಗುವರು)

**ಇಂತಿದು ಕೌಸಲ್ಯಾಜನಕಸಂದರ್ಶನಮೆಂಬ**
**ಚತುರ್ಥಾಂಕಂ**



# — ಪಂಚಮಾಂಕಂ —

(ನೇಪಥ್ಯದಲ್ಲಿ)

ಸೈನಿಕರೆಲ್ಲರೂ ಕೇಳಿಕೊಳ್ಳಬೇಕು—

**ಕಂ॥** ಕುವರರನ ಬವರದೊಳಿಮುಗಿಂ
ದವಲಂಬನಮಾಯ್ತು ಬೆದರಲೇಕೆ! ಸುಮಂತ್ರಂ।
ಜವದಿಂ ಚೋದಿಪ ರಥದ
ಲ್ಲವಸರದಿಂ ಚಂದ್ರಕೇತು ಬಂದಪನೀಗಳ್ ॥ ೧ ॥

(ಬಳಿಕ ಸುಮಂತ್ರನು ತೇರ್ಕೈಸುವ ರಥದಲ್ಲಿ ಕುಳಿತ ಧನುರ್ಧರನಾದ ಚಂದ್ರಕೇತುವು ಅದ್ಭುತಹರ್ಷಸಂಭ್ರಮಗಳಿಂದ ಕೂಡಿದವನಾಗಿ ಪ್ರವೇಶಿಸುವನು)

**ಚಂದ್ರಕೇತು**—ಆರ್ಯಸುಮಂತ್ರನೇ, ನೋಡು! ನೋಡು!

— ಚಂಪಕಮಾಲೆ —

ಕಿನಿಸಿನಿಸಿಂದೆ ವಕ್ತ್ರಕೆನಸುಂ ಕಳೆಯೇರಿರೆ ಪಂಚಚೂಡಮುಂ
ತೊನೆಯುತಿರಲ್ಕುಮಾರಕನನಾರತಮುಂ ನಿನದಿಪ್ಪ ಚಾಪದಿಂ।
ಮೊನೆಗಳ ವೃಷ್ಟಿಯಂ ಕರೆದಪಂ ಭರದಿಂ ಬವರಕ್ಕೆ ಸಂದನೀ—
ಕಿನಿಗೆನಲಿಂತು ಪೌರುಷದೆ ಪೆರ್ಚಿದನಾವನೊ ನೋಡಲದ್ಭುತಂ ॥ ೨ ॥

ಅಷ್ಟು ಮಾತ್ರವಲ್ಲದೆ—

— ಮಹಾಸ್ರಗ್ಧರೆ —

ಕರಿಗಂಡಗ್ರಂಥಿಯಂ ಭೇದಿಸಿ ಧಗಧಗಿಸುತ್ತಿರ್ಪ ಬಾಣಾಗ್ನಿಯಂ ಸು—
ಟ್ಟುರಿಯಂದಂಸುತ್ತುತಿರ್ಪುಜ್ಜ್ವಲತೆಯ ಗತಿಯಿಂದಂಜ್ವಲಿಪ್ಪಂತೆಗೆಯ್ದುಂ।
ಮೆರೆದಪ್ಪಂತೋರ್ಕೆಗೊಂಡಿಲ್ಲದರಘುಕುಲನೂತ್ನಾಂಕುರಂಬೊಲ್ವಿಭಾವ್ಯಂ
ತರಳಂ ನೋಡಲ್ಕಿದಾವಂ ಮುನಿಜನಶಿಶುವೆಂದದ್ಭುತಂ ತೋರ್ಪುದಲ್ತೇ
॥ ೩ ॥

**ಸುಮಂತ್ರ**—ಆಯುಷ್ಮಂತನೇ—

**ಕಂ॥** ಪೌರುಷದಿಂದಂ ದೇವಾ
ಸುರರಂ ವಿರಾರಿಪ ಕುಮಾರನಂ ನೋಡುತ್ತುಂ।
ಸ್ಮರಿಪೆಂ ಗಾಧಿಜಯಜ್ಞದೊ
ಳರಿಗಳನಿಸಲೆಂದು ನಿಂದ ರಘುನಂದನನಂ ॥ ೪ ॥

**ಚಂದ್ರಕೇತು**—ಪೂಜ್ಯನೆ, ಈ ತರಳನನ್ನು ಇದಿರಿಸಲು ನಮ್ಮವರ ನೇಕರ ಪ್ರಯತ್ನವೆಂಬುದು ನಮಗೆ ಲಜ್ಜಾಸ್ಪದವಲ್ಲವೆ?

— ಮತ್ತೇಭವಿಕ್ರೀಡಿತ —

ಇದೊ ನೋಡೊರ್ವನನಾವರಿಪ್ಪುದು ಪಲಂಬರ್ಪಾನಮತ್ತರ್ಚಲ—
ತ್ಪದವಿನ್ಯಾಸದೊಳಲ್ಲಿ ಶಸ್ತ್ರನಿಕರಂದಾಳುತ್ತೆ ಪೊಂದೇರ್ಗಳೊಂ।
ದಿದ ವೀರರ್ಕಳತಂಡಮಾವರಿಪುದಿತ್ತಂ ಮತ್ತೆ ತಾನೆತ್ತಲುಂ
ಪುದಿಗುಂ ಸೋರ್ವಮದಾಂಬುದುರ್ದಿನದ ಮತ್ತೇಭಾಂಬುದಂ ಸತ್ವರಂ
॥ ೫ ॥

**ಸುಮಂತ್ರ**— ಚಂದ್ರಕೇತುಕುಮಾರನೆ, ನಮ್ಮ ಸೈನಿಕರೆಲ್ಲರೂ ಸೇರಿದರೂ ಈತನೊಡನೆ ಹೋರಾಡಲಾರರೆಂದರೆ, ಒಬ್ಬೊಬ್ಬರಾಗಿ ಸಾಗಿದರೆ ಬೇರೆ ಹೇಳುವುದೇನು?

**ಚಂದ್ರಕೇತು**—ಪೂಜ್ಯನೆ, ತ್ವರೆಮಾಡಬೇಕು! ಈತನು ನಮ್ಮ ಸೈನಿಕರೆಲ್ಲರ ಸಂಹಾರಕ್ಕಾಗಿಯೇ ಹೊರಟಿರುವನು. ಅದು ಹೇಗೆಂದರೆ—

— ಉತ್ಪಲಮಾಲೆ —

ಬಾರಿಪ ದುಂದುಭಿಧ್ವನಿಗೆ ಘೀಳಿಡುವಾನೆಯು ಕರ್ಣರಂಧ್ರಮಂ
ಬಾರಿಪ ಶಿಂಜಿನೀಕಠಿನರಾವಮನಾಗಿಸಿ ಮೃತ್ಯುವಕ್ತ್ರದಿಂ।
ಕಾರಿಸಿ ಘೋರರುಂಡಗಳ ಖಂಡಗಳಂ ರಣರಂಗದೊಳ್ಕರಂ
ಪೂರಿಪನಲ್ತೆ ವೀರನಿವನೆಮ್ಮಯ ಸೇನೆಗೆ ಕಾಲಭೈರವಂ ॥ ೬ ॥

**ಸುಮಂತ್ರ**—(ಸ್ವಗತಂ) ಇಂತಹ ವೀರಬಾಲಕನೊಂದಿಗೆ ಮಲ್ಲಯುದ್ಧಮಾಡಲು ಚಂದ್ರಕೇತು ಕುಮಾರನನ್ನು ನಾನೆಂತು ಅನುಮತಿಸಲಿ? (ಯೋಚಿಸಿ) ಅಥವಾ, ಚಿಂತಿಸಿ ಫಲವೇನು! ನಾನು ಇಕ್ಷ್ವಾಕು

ವಂಶಕ್ಕೆ ಅನುಭವಹೇಳತಕ್ಕ ವಯಸ್ಕನಲ್ಲವೆ! ಅನಿವಾರ್ಯವಾದ ಸಂಗರವು ಬಂದೊದಗಿರಲು ಬೇರೆ ಮಾಡತಕ್ಕದ್ದೇನು?

**ಚಂದ್ರಕೇತು**—(ಆಶ್ಚರ್ಯಲಜ್ಜೆಗಳಿಂದ ಕೂಡಿದವನಾಗಿ)ಆಹಾ! ನಮ್ಮ ಸೈನ್ಯವೆಲ್ಲವೂ ಚದರಿಹೋಯಿತು!

**ಸುಮಂತ್ರ**—(ಬಹುಬೇಗನೆ ರಥವನ್ನು ಚೋದಿಸುತ್ತ) ಆಯುಷ್ಮಂತನಾದ ಚಂದ್ರಕೇತುವೇ, ಆ ವೀರಕುಮಾರನಿದೋ ಸಮೀಪಿಸಿರುವನು.

**ಚಂದ್ರಕೇತು**—(ಆಶ್ಚರ್ಯದೊಡನೆ) ಪೂಜ್ಯನೆ, ಅವನ ಹೆಸರೇನೆಂದು ತಿಳಿದಿರುವುದೆ?

**ಸುಮಂತ್ರ**—ಅವನನ್ನು ಲವನೆಂದು ಕರೆಯುವರು.

**ಚಂದ್ರಕೇತು**—

ಕಂ॥ ವೀರಕುಮಾರಕ ಭೋ ಲವ!
ಪೋರುವುದೇನಲ್ಲಿ ಸೈನಿಕರ್ನಿನಗೆಣೆಯೇ! ।
ತೋರೆನ್ನೊಳ್ಸಾಹಸಮಂ
ಮೀರುವಕೀರ್ತಿನ್ನ ಕೀರ್ತಿನೊಳ್ತಣಿಯುಗೆ ತಾಂ ॥ ೭ ॥

**ಸುಮಂತ್ರ**— — ಮಾಲಿನಿ —

ಕರಿಹನನದೊಳಿರ್ದುಂ ಮೇಘನಿರ್ಘೋಷಮಂ ಕೇ-
ಳ್ದಿರದೆ ಮರಳುತಿರ್ಪಾ ಸಿಂಹಶಾಬಂಬೊಲೀಗಳ್ ।
ತರಳನೆ ಕರೆಯಲ್ನೀಂ ಸೈನ್ಯಸಂಹಾರದಿಂ ಪಿಂ-
ದಿರುಗಿದನಿದೊ ನೋಡಾ ವೇಗದಿಂ ವೀರಪೋತಂ ॥ ೮ ॥

**ಲವ**-(ಧೀರೋದ್ಧತನಾಗಿ ಪ್ರವೇಶಿಸಿ)ರಾಜಪುತ್ರನೇ, ನೀನು ಇಕ್ಷ್ವಾಕು ವಂಶಕ್ಕೆ ಒಪ್ಪುವಂತೆಯೇ ಹೇಳಿರುವೆ! ಆದುದರಿಂದಲೇ ನಾನೀಗ ನಿನ್ನೆಡೆಗೆ ಬಂದಿರುವೆನು.

(ನೇಪಥ್ಯದಲ್ಲಿ ಕುಮಾರನೇ ಬಾಬಾರೆಂದು ಕೋಲಾಹಲವು ಕೇಳಿಸುವುದು)

**ಲವ**—(ಅದನ್ನು ಕೇಳಿ ಸಹಿಸಲಾರದೆ ಉದ್ಧತನಾಗಿ ಮಲೆಯುತ್ತ ಹಿಂದಿರುಗಿ ನೋಡಿ) ಇದೇನು! ಈ ಪಡೆವಳರೆಲ್ಲರೂ ಈಗ ತಾನೇ ನನ್ನೊಂದಿಗೆ

ಸೋತು ಓಡಿಹೋದರೂ ಮರಳಿ ಬಂದು ನನ್ನನ್ನು ಮುತ್ತಿಕೊಳ್ಳ ಬೇಕೆಂದಿರುವರೆ? ಆಹಾ! ನಿರ್ಲಜ್ಜರಾದ ಈ ಮೂಢರಿಗೆ ಧಿಕ್ಕಾರವಿರಲಿ!

— ಚಂಪಕಮಾಲೆ —

ಕಲಹದುದಂತಮೊ ಪ್ರಲಯಮಾತದೆ ಪರ್ವಿರೆ ಮತ್ತೆ ಮದ್ಭುಜಾ
ಚಲದುಪಘಾತದಿಂ ಚಲಿಸಿ ಸುತ್ತಿ ಪೊರಳ್ತರೆ ವೀಚಿಮಾಲೆ ಮಾ-- ।
ರ್ವಲೆಯುತೆ ನಾದಮೆಳ್ಚಿಪ ಚಮೂಪಸಮುದ್ರಮೆ ನೋಡೆ ವಾಡವಾ
ನಲನೆನಿಪೆನ್ನ ಕೋಪರಸನಾಗ್ರಕೆ ತುತ್ತೆನಲೀಗ ಬತ್ತುಗುಂ ॥ ೯ ॥

(ಎಂದು ಬೇಗಬೇಗನೆ ಹೋಗುತ್ತಿರುವನು)

**ಚಂದ್ರಕೇತು**—ಎಲೆ ಎಲೆ ತರಳನೇ, ನೀನು—

— ಮತ್ತೇಭವಿಕ್ರೀಡಿತ —

ಪಿರಿದುಂ ಸದ್ಗುಣಿಯೆಂದು ನೀನೆನಗೆ ಸನ್ಮಿತ್ರಂ ವಲಂ ಭಾವಿಸಲ್
ಗುರುಸೈನ್ಯಂ ಮದಧೀನಮಿಂತದಕೆ ನೀನುಂ ಸ್ವಾಮಿಯಪ್ಪೈ ದಿಟಂ ।
ಪರಿಚರ್ಯಾರತರಲ್ಲಿ ನೀನೆ ಕಲಹಂಗೆಯ್ವಪ್ಪುದೇಂ ವಿಕ್ರಮ
ಕ್ಕೊರೆಗಲ್ಲೆಂದದ ಚಂದ್ರಕೇತುವಿದಕೋ ಸನ್ನದ್ಧನಾಗಿರ್ದಪಂ ॥ ೧೦ ॥

**ಲವ**— (ಹರ್ಷಸಂಭ್ರಮಗಳಿಂದ ಕೂಡಿದವನಾಗಿ) ಆಹಾ! ಮಹಾನುಭಾವನಾದ ರವಿಕುಲಕುಮಾರನ ಮಾತುಗಳು ಪ್ರಸನ್ನಗಳಾಗಿಯೂ ಕರ್ಕಶಗಳಾಗಿಯೂ ಇರುವುವಲ್ಲಾ! ಆದುದರಿಂದ ನಾನೀ ಸೈನಿಕರ ಗೊಡವೆಯನ್ನು ಬಿಟ್ಟು ಈತನನ್ನೇ ಸಂಭಾವಿಸುವೆನು.

(ಮತ್ತೂ ನೇಪಥ್ಯದಲ್ಲಿ ತರಳನೇ ಬಾರೈ! ಬಾರೈ! ಎಂಬ ಕಲಕಲವು ಕೇಳಿಸುವುದು)

**ಲವ**—(ಮುನಿಸುಬೇಸರಗಳೊಂದಿಗೆ) ಆಹಾ! ಈ ವೀರನೊಡನೆ ವೀರವಾದವನ್ನು ಮಾಡಿಕೊಳ್ಳುವೆನೆಂದರೆ ಪಾಪಿಗಳಾದ ಈ ಪಡೆವಳರು ಬಿಡಲಾರರಲ್ಲಾ! (ಎಂದು ಅವರಿಗೆ ಅಭಿಮುಖನಾಗಿ ಹೋಗುವನು).

**ಚಂದ್ರಕೇತು**—ಆರ್ಯನೇ, ಇದು ನೋಡತಕ್ಕ ದೃಶ್ಯವಾಗಿದೆ.

(ಮಹಾಸ್ರಗ್ಧರೆ)

ಇದೊ ನೋಡುತ್ಕ್ಷಿಪ್ತಧನ್ವಂ ನಿರುಕಿಸುತೆ ಮಹತ್ಕೌತುಕೋದ್ದೀಪ್ತನೆಮ್ಮಂ
ಕುದಿಯುತ್ತುಂದರ್ಪದಿಂದಂ ಬಲದೆಡೆಗೆ ಗಮಿಪ್ಪಂದಮೆಂತುಂ ವಿಚಿತ್ರಂ ।
ಉದಿಸಿರ್ಪಿಂದ್ರಾಯುಧಂತುಂಬಿದಜಲಧರಮಂಭೂಷಿಸುತ್ತಿರ್ಪೊಡಂ ಮ-
ತ್ತದು ವಾಯುಕ್ಷೋಭದಿಂದಂ ಚಲಿಸುತೆ ಮೆರೆದಪ್ಪಂತೆ ತೋರ್ದಪ್ಪನೀತಂ
॥ ೧೧ ॥

**ಸುಮಂತ್ರ**—ಈತನನ್ನು ಕುಮಾರನೇ ನೋಡಬೇಕಲ್ಲದೆ ನಾನು ವಿಸ್ಮಯದಿಂದ ಪರವಶನಾಗಿರುವೆನು.

**ಚಂದ್ರಕೇತು**—ನಮ್ಮ ಪಡೆಯಲ್ಲಿರುವ ಕ್ಷತ್ರಿಯವೀರರೇ

— ಮತ್ತೇಭವಿಕ್ರೀಡಿತ —

ಪಲಬರ್ನೀಮಿರಲಾನೆಯುಂ ಕುದುರೆಯುಂ ತೇರಂ ಸಮಂತೇರ್ದು ಕೇ-
ವಲಬಾಲಂ ಮೃಗಚರ್ಮದುತ್ತರಿಗೆಯುಂ ಪೊರ್ದಿರ್ಪ ಕಾಲಾಳಿನು- ।
ತ್ತೊಲವಿಂ ಕಂಚುಕಧಾರಿಗಳ್ಪಿರಿಯರೆಂತುಂ ಖ್ಯಾತಿಕಾಮರ್ಕಳುಂ
ಕಲಹಕ್ಕೈದುವಿರಕ್ಕಟಾ! ತರಳನೇ ಸೋಲ್ಪಪ್ಪೊಡಂ ನಿಂದ್ಯರಾವ್ ॥೧೨॥

**ಲವ**—(ಮನೋವ್ಯಾಕುಲದೊಡನೆ) ಆಹಾ! ಇದೇನು! ರಾಜಪುತ್ರನು ನನ್ನಲ್ಲಿ ದಯೆತೋರುತ್ತಿರುವನೆ? ಈ ರಾಜಕುಮಾರನೊಡನೆ ಹೋರಾಡಲು ಕಾಲವಿಳಂಬವಾಗದಂತೆ ಜೃಂಭಕಾಸ್ತ್ರದ ಮೂಲಕ ಸೈನಿಕರನ್ನು ಸ್ತಂಭನಗೊಳಿಸುವೆನು. (ಎಂದು ಧ್ಯಾನವನ್ನು ಅಭಿನಯಿಸುವನು).

**ಸುಮಂತ್ರ**—ಓಹೋ! ನಮ್ಮ ಸೈನ್ಯಘೋಷಗಳು ಫಕ್ಕನೆ ಕೇಳಿಸದಾಗಲು ಕಾರಣವೇನು?

**ಲವ**—ಈಗ ತನ್ನ ಹೆಮ್ಮೆಯನ್ನೇ ಕೊಚ್ಚಿಕೊಳ್ಳುವ ಈ ಬಾಯಿಬಡುಕನನ್ನು ವಿಚಾರಿಸಿಕೊಳ್ಳುವೆನು.

**ಸುಮಂತ್ರ**—(ಸಂಭ್ರಮದೊಡನೆ) ಚಂದ್ರಕೇತುಕುಮಾರನೆ, ಈತನು ಜೃಂಭಕಾಸ್ತ್ರವನ್ನು ಪ್ರಯೋಗಿಸಿರುವನೆಂದು ತೋರುವುದು.

ಚಂದ್ರಕೇತು--ಅದರಲ್ಲಿ ಸಂದೇಹವಿಲ್ಲ--

ಕಂ॥ ಕಗ್ಗತ್ತಲೆವಿಂಚುಗಳೇ
ಭುಗ್ಗನೆ ಕವಿಯಲ್ಕೆ ತೋರದಾದುದು ನೋಟಂ ।
ಪಿಗ್ಗುತೆ ವೊಳಗಿದ ಸೈನ್ಯವ
ಬಗ್ಗಿಸಿ ಬರೆದಂತೆ ಗೆಯ್ದುದಿದು ಜೃಂಭಕವೈ ॥ ೧೩ ॥

ಆಹಾ! ಇದೆಂತಹ ಅದ್ಭುತವು--

— ಮಹಾಸ್ರಗ್ಧರೆ —

ಇದುತಾಂ ಪಾತಾಳಕುಂಜಾಂತರದೊಳಡಗಿದಾ ಮರ್ವಿನೊಂದೊಡ್ಡು ಮತ್ತಿ
ನ್ನಿದು ಪಾಕಂಗೊಂಡು ಸೀಸಂ ದ್ರವಿಸುತಿರೆ ನಭಕ್ಕೆಳ್ದ ಕಿರ್ವಾರತೇಜಂ ।
ಇದು ಸಂವರ್ತಾಂತವಾತಂ ಭರದೆ ಪರೆಪಿದಾ ಪುಷ್ಕರಾವರ್ತಕಂದಾ-
ಳ್ದಿದ ವಿಂಧ್ಯೋದ್ಘಾತವಿದ್ಯುದ್ದ್ಯುತಿಯೆನೆ ನಭದೊಳ್ ಜೃಂಭಿಕುಂ
ಜೃಂಭಕಾಸ್ತ್ರಂ ॥ ೧೪ ॥

ಸುಮಂತ್ರ--ಈ ಬಾಲಕನಿಗೆ ಅವು ಎಲ್ಲಿಂದ ಹೇಗೆ ತಾನೇ ದೊರೆ ತಿರಬಹುದೊ?

ಚಂದ್ರಕೇತು--ಭಗವಂತನಾದ ವಾಲ್ಮೀಕಿಯ ಬಳಿಯಿಂದಲೇ ಆಗಿರಬಹುದೆಂದು ಊಹಿಸುವೆನು.

ಸುಮಂತ್ರ--ಕುಮಾರನೇ, ಜೃಂಭಕಾಸ್ತ್ರಗಳನ್ನು ವಾಲ್ಮೀಕಿ ಮುನಿಯೇ ಉಪದೇಶಿಸಿರಬಹುದೆಂದು ಹೇಳುವುದು ಸರಿಯಲ್ಲ. ಯಾ ಕೆಂದರೆ--

ಕಂ॥ ಪಿಂದೆ ಭೃಶಾಶ್ವನ ಮುಖದಿಂ
ಬಂದುವು ಕುಶಿಕಾತ್ಮಜಂಗೆ ದಿವ್ಯಾಸ್ತ್ರಂಗಳ್ ।
ಮುಂದವನಿಂ ಶ್ರೀರಾಮಂ
ಗೆಂದಿನಿತೇ ತೋರ್ಪುದವಕೆ ಕೊಳ್ಕೊಡೆ ನೋಡಲ್ ॥೧೫॥

**ಚಂದ್ರಕೇತು**—ಪೂಜ್ಯನೆ, ಆ ಪರಂಪರೆಯು ಮಾತ್ರವಲ್ಲದೆ ಸತ್ವ ಗುಣಭೂಯಿಷ್ಠರಾಗಿ ಅಂತರ್ದೃಷ್ಟಿಯುಳ್ಳ ಇತರಮಹರ್ಷಿಗಳೂ ಕಂಡು ಕೊಳ್ಳುತ್ತಿರಬಹುದು.

**ಸುಮಂತ್ರ**—ವತ್ಸ! ಸಾವಧಾನನಾಗು! ಪ್ರತಿವೀರನು ನಿನ್ನ ಸಮೀಪಕ್ಕೇ ಬಂದನು.

**ಕುಮಾರರಿಬ್ಬರೂ**—(ಒಬ್ಬರನ್ನೊಬ್ಬರು ಅನ್ಯೋನ್ಯವಾಗಿ) ಆಹಾ! ಈತನ ದರ್ಶನವು ಎಷ್ಟು ಆನಂದದಾಯಕವು! (ಪ್ರೀತಿಪೂರ್ವಕವಾಗಿ ಭಾವಿಸಿ ನೋಡುತ್ತ)

— ಮತ್ತೇಭವಿಕ್ರೀಡಿತ —

ಇದುವೇಂಸಾಮ್ಯದಸೇರ್ಕೆಯೋ! ಗುಣಗಣಂಪೆಂಪಾಂತುದೋ! ಪೂರ್ವಜ
ನ್ಮದ ಸಂಬಂಧನಿವೇದಕಂ ಪರಿಚಯಂ ತಾನಪ್ಪುದೋ! ನೋಡೆಮು—।
ತ್ತಿದು ತಾಂ ರಕ್ತದ ಬಂಧಮಿರ್ದುಮಕಟಾ ದೈವೇಚ್ಛೆಯಿಂ ತೋರದಾ
ದುದೊ! ಮನ್ಮಾನಸಮೀತನಂ ನಿರುಕಿಸಲ್ವ್ಯಾಮೂಢಮಾದಪ್ಪುದೇಂ?
॥ ೧೬ ॥

**ಸುಮಂತ್ರ**—ಆಯುಷ್ಮಂತನೇ, ಒಬ್ಬನಿಗೆ ಒಬ್ಬನಲ್ಲಿ ಸ್ವಾಭಾವಿಕ ವಾಗಿ ಪ್ರೀತಿಯುಂಟಾಗುವುದು ಲೋಕದಲ್ಲಿ ಪ್ರಾಣಿಗಳಿಗೆ ಇರತಕ್ಕ ಧರ್ಮವು. ಅದನ್ನೇ ತಾರಾಮೈತ್ರಿಯುಳ್ಳ ಚಕ್ಷುಃಪ್ರೀತಿಯೆಂದು ಜನರು ಔಪಚಾರಿಕವಾಗಿ ಹೇಳುತ್ತಿರುವರು. ಅಲ್ಲದೆ, ಅದನ್ನು ವಿಚಾರಿಸಿದರೂ ಮೂಲವು ಸಿಕ್ಕದಿರುವ ಅನುಭವೈಕವೇದ್ಯವಾದ ಪ್ರಮಾಣವನ್ನಾಗಿ ವಿದ್ವಾಂಸರು ನಂಬುತ್ತಲೂ ಇರುವರು. ಆದುದರಿಂದ—

**ಕಂ॥** ಲೋಕದೊಳೊರ್ವಂಗೊರ್ವನೊ
ಳಾಕಸ್ಮಿಕಮಪ್ಪ ಪಕ್ಷಪಾತಮವರ್ಜ್ಯಂ।
ಆಕಲಿತತಂತುವೆಂಬವೊ
ಲಾ ಕೂರ್ಮೆಯೆ ಸೇರ್ದು ಜನರನೊಂದಾಗಿಸುಗುಂ॥ ೧೭ ॥

**ಕುಮಾರರಿಬ್ಬರೂ**—(ಪರಸ್ಪರವಾಗಿ)

— ಚಂಪಕಮಾಲೆ —

ಸುಕರಮೆ ಭವ್ಯಮೂರ್ತಿಗತಿನೂತನಕೋಮಲಪಟ್ಟರಮ್ಯಕಿಂ
ತಕಟ ಶರಂಗಳಂ ಬಿಡುವುದೇ ಮನಮುಮ್ಮಳಿಕುಂ ದಲೇತಕೋ।
ಸುಕೃತಿಯ ರಮ್ಯಗಾತ್ರಮನಭೀಕ್ಷಿಸಿ ತಳ್ಕಿಪೊಡಾಶೆಯಿಂದೆ ಕೋ–
ರಕಿತಕದಂಬವೃಕ್ಷದ ತೆರಂ ಪುಲಕಂದಳೆದಪ್ಪುದೆನ್ನೊಡಲ್ ॥ ೧೮ ॥

ಅಷ್ಟು ಮಾತ್ರವಲ್ಲದೆಯೂ—

— ಉತ್ಪಲಮಾಲೆ —

ಪೌರುಷದಿಂದೆ ಬರ್ಪವನೊಳಾಯುಧವಿಲ್ಲದೆ ಪೋರಲಕ್ಕುಮೇ?
ಘೋರತರಾಸ್ತ್ರಮಾಂತೊಡಮವಂಗದು ನಾಟದಿರಲ್ಕದೇಕದಂ।
ಧಾರಣೆಗೆಯ್ದು ನಿಂದಿರೆಯುಮೇಂ? ಮರಳ್ಪೊಡೆ ಭೀರುವಾಗೆನೇ?
ವೀರರ ಕೂರ್ಪು ನೋಡಲದು ಬಾಧಿಸದಿರ್ಕುಮೆ ಕೂರ್ಮೆಯಂದಮಂ
॥ ೧೯ ॥

ಸುಮಂತ್ರ—(ಲವನನ್ನು ಸರಿಯಾಗಿ ನೋಡಿ ಕಂಬನಿಗರೆಯುತ್ತ ಸ್ವಗತಂ) ಹೃದಯವೆ, ಬೇರೆ ವಿಧವಾಗಿ ಯೋಚಿಸುತ್ತ ನೀನೇಕೆ ಸುಮ್ಮನೆ ತಲ್ಲಣಿಸುತ್ತಿರುವೆ?

ಕಂ॥ ಬಿದಿ ಕಾಂಕ್ಷೆಗೆ ಬೀಜಮೆನಿ
ಪ್ಪುದನೇ ಕೊಂಡೊಯ್ದಿರಲ್ಕೆ ಮರುಗುವುದೇಕೋ? ।
ಮೊದಲೇ ಲತೆ ತುಂಡಾಗಿರ
ಲದರೊಳ್ಕುಸುಮಪ್ರಸೂತಿಗೆಡೆಯಿರ್ದಪುದೇ? ॥ ೨೦ ॥

ಚಂದ್ರಕೇತು—ಆರ್ಯಸುಮಂತ್ರನೇ, ನಾನೀಗ ರಥದಿಂದ ಕೆಳಗಿಳಿಯುವೆನು.

ಸುಮಂತ್ರ—ಕಾರಣವೇನು?

ಚಂದ್ರಕೇತು—ಈ ವಿಕ್ರಮಿಯು ಪೂಜಿತನಾಗುವನು; ಮಾತ್ರವಲ್ಲದೆ ಕ್ಷತ್ರಿಯರ, ಧರ್ಮವೂ ಪರಿಪಾಲಿತವಾಗುವುದು. ರಥದಲ್ಲಿ ಕುಳಿ

ತವರು ಪಾದಚಾರಿಯೊಡನೆ ಹೋರಾಡಬಾರದೆಂದು ಶಾಸ್ತ್ರಜ್ಞರು ಹೇಳುತ್ತಿರುವರಲ್ಲವೆ?

ಸುಮಂತ್ರ—(ಸ್ವಗತಂ) ಎಂತಹ ಬಿಕ್ಕಟ್ಟು ಸಂಭವಿಸಿತು! ನಾನೀಗ ಮಾಡುವುದೇನು!

ಕಂ॥ ಇನಿತನುಭವಮಂ ಪಡೆದುಂ
ಘನಕಾರ್ಯಕ್ಕಿಳಿಯೆ ತಡೆಯಲಾಗದು ನಿಸದಂ ।
ಅನುಮತಿಸೆನೆ ಸಾಹಸಕಿಂ
ತನುಗೊಂಡ ರಣಕ್ಕದೆಂತು ಸಮ್ಮತಿಸಿದಪೆಂ? ॥ ೨೧ ॥

ಚಂದ್ರಕೇತು—ನಮ್ಮ ತಾತಂದಿರು ಸಂಶಯಬಂದಾಗಲೆಲ್ಲಾ ತಮ್ಮ ತಂದೆಯ ಪ್ರಿಯಮಿತ್ರರಾದ ನಿಮ್ಮನ್ನೇ ಕೇಳಿಕೊಳ್ಳುವರಲ್ಲ. ಹೀಗಿರಲು, ನನ್ನ ಸಂದರ್ಭದಲ್ಲಿ ಮಾತ್ರ ಇಂತಹ ಯೋಚನೆಯೇಕೆ?

ಸುಮಂತ್ರ ಆಯುಷ್ಮಂತನೆ, ನಿನ್ನ ಅಭಿಲಾಷೆಯು ಧರ್ಮವನ್ನು ಅವಲಂಬಿಸಿರುವುದೇ ಹೊರತು ಬೇರೆ ವಿಧವಾದುದಲ್ಲ.

ಕಂ॥ ಇದು ಸಾಂಗ್ರಾಮಿಕಧರ್ಮಂ
ಮೊದಲಿಂದಂ ನೆಗಳ್ದ ವೀರಪದ್ಧತಿಯೆನಿಕುಂ ।
ಇದನೇ ರಘುಕುಲಸಿಂಹ
ರ್ಪದಪಿಂದಂ ಪೊರೆಯೆ ನಿನಗಮಿಂತಿದೆ ವಿಹಿತಂ ॥ ೨೨ ॥

ಚಂದ್ರಕೇತು—ಆರ್ಯನ ವಚನವು ಅಸಮಾನವಾದುದು. ಯಾಕೆಂದರೆ—

ಕಂ॥ ಇತಿಹಾಸಮಂ ಪುರಾಣ
ಪ್ರತತಿಯನಾ ವಿವಿಧಧರ್ಮಶಾಸ್ತ್ರದ ತಿರುಳಂ ।
ಸುತರಾಘವಾನ್ವವಾಯ
ಸ್ಥಿತಿಯಂ ಸರಿಯಾಗಿ ನೀಮೆ ತಿಳಿದಪಿರಲ್ತೇ ॥ ೨೩ ॥

ಸುಮಂತ್ರ— ಸಂತೋಷಬಾಷ್ಪದೊಡನೆ ಚಂದ್ರಕೇತುವನ್ನು ಆಲಿಂಗಿಸಿಕೊಂಡು) ಆಯುಷ್ಮಂತನೇ, ನೀನಿಂದು—

ಕಂ॥ ಕವಿದಂದಾ ರಾವಣಿಯುಂ
ಜವನೆಡೆಗೆಯ್ದಿಸಿದ ವತ್ಸಗಂ ಸುತ ನೀನ೦ಂ ।
ತವೆ ಪಾಲಿಸೆ ರಣಧರ್ಮದ
ನವನಿಯೊಳಿನವಂಶಮೋಳ್ಗಿಗೊಂಡುದು ಬಿದಿಯಿಂ ॥೨೪॥

ಚಂದ್ರಕೇತು—(ವ್ಯಸನದೊಡನೆ)

ಕಂ॥ ಅನಪತ್ಯತೆಯೇ ಜ್ಯೇಷ್ಠಂ
ಗಿನಕುಲಕಿಂತಪ್ರತಿಷ್ಠೆ ಸಮನಿಸಿದಪುದೇ ? ।
ಎನುತುಂ ಮೂವರ್ತಂದೆಗ
ಳನುದಿನಮುಂ ಮರುಕದಿಂದೆ ತಪಿಸುವರಲ್ತೇ ॥ ೨೫ ॥

ಸುಮಂತ್ರ—ಈ ಕುಮಾರನ ವಾಣಿಗಳು ಹೃದಯಮರ್ಮವಿದಾರಣಗಳು.

ಲವ—ಆಹಾ! ಇದೇನು? ಒಮ್ಮೆಯೇ ಭಿನ್ನರಸಗಳು ಒಂದಾಗಿ ತೋರುತ್ತಿವೆಯಲ್ಲಾ!

— ಚಂಪಕಮಾಲೆ —

ಉದಯಿಪ ಚಂದ್ರನಂ ನಿರುಕಿಸುತ್ತೆ ಕುಮುದ್ವತಿ ನಲ್ಮೆಯೊಂದುವಂ
ದದೊಳಿನತೀಕ್ಷಣಂಗಳಿವು ವೀರನನೀಕ್ಷಿಸಿ ತೃಪ್ತಿಯಾಂತೊಡಂ ।
ಮದಿಸಿದ ಬಾಹು ಕಿಂಕಿಣಿನಿನಾದದಿನೊಪ್ಪುವ ಬಿಲ್ಲಕೊಪ್ಪನೊಂ
ದಿದ ಗುಣಮಂ ತುಡುಂಕುತಿದೊ ಭಂಡಣಕಿಂತನುವಪ್ಪುದೇತಕೋ ॥೨೬॥

ಚಂದ್ರಕೇತು—(ರಥದಿಂದ ಇಳಿಯುತ್ತ) ಆರ್ಯ ಸುಮಂತ್ರನೇ, ಇಕ್ಷ್ವಾಕುವಂಶೋತ್ಪನ್ನನಾದ ಚಂದ್ರಕೇತುವು ಅಭಿವಂದಿಸಿಕೊಳ್ಳುವನು.

ಸುಮಂತ್ರ— ಆಯುಷ್ಮಂತನೇ, ಮಹಾತ್ಮನಾದ ಆದಿವರಾಹ ಮೂರ್ತಿಯು ನಿನ್ನ ವೈರಿಗೆ ಸೋಲನ್ನು ಉಂಟುಮಾಡಿ ನಿನಗೆ ಜಯವನ್ನು ಒದಗಿಸಲಿ! ಅಷ್ಟುಮಾತ್ರವಲ್ಲದೆ, ಮಗುವೇ! ನಿನಗೆ ವಿಜಯವಾಗುವಂತೆ—

ಮತ್ತೇಭವಿಕ್ರೀಡಿತ॥

ಕುಲದೇವಂ ಸವಿತಾರನೊಲ್ದು ರಣಕರ್ಮಕ್ಕಂ ಸಮುತ್ಸಾಹಿಕುಂ
ಗೆಲವಪ್ಪಂತೆ ಪುರೋಹಿತಂ ಗುರುವಸಿಷ್ಠಂ ಕ್ಷೇಮಮಾಶಂಸಿಕುಂ ।
ಗೆಲವಿಂಗೋಜಮನೊಲ್ದು ವಿಷ್ಣುಗರುಡಾಗ್ನೀಂದ್ರಾನಿಲರ್ನೀಡುಗುಂ
ಬಲವಿಾಗುಂ ಗೆಲೆ ರಾಮಲಕ್ಷ್ಮಣಧನುರ್ಜ್ಯಾಘೋಷಮಂತ್ರಂ ವಲಂ
॥ ೨೭ ॥

ಲವ—ವೀರನೇ, ನೀನು ರಥದಲ್ಲಿ ಕುಳಿತಿದ್ದರೇನೇ ಶೋಭಿಸುವೆ! ಸಾಕು! ಸಾಕು! ಕೆಳಗೆ ಇಳಿಯುವಂತಹ ಅತ್ಯಾದರವು ಬೇಕಾಗಿಲ್ಲ.

ಚಂದ್ರಕೇತು—ಹಾಗಾದರೆ ಮಹಾನುಭಾವನಾದ ನೀನೂ ಬೇರೊಂದು ರಥವನ್ನು ಅಲಂಕರಿಸಬೇಕು.

ಲವ—(ಸುಮಂತ್ರನನ್ನು ಕುರಿತು) ಪೂಜ್ಯನೆ, ನೀನು ಈ ರಾಜಪುತ್ರನನ್ನು ರಥದಲ್ಲಿ ಕುಳಿತುಕೊಳ್ಳುವಂತೆ ಹೇಳಬೇಕು.

ಸುಮಂತ್ರ—ವೀರನೇ, ನೀನು ಚಂದ್ರಕೇತುಕುಮಾರನ ಮಾತನ್ನು ಮನ್ನಿಸಬೇಡವೆ?

ಲವ—ಪೂಜ್ಯನೆ, ನಮ್ಮದೇ ಆಗಿರುವ ಉಪಕರಣಗಳ ವಿಷಯದಲ್ಲಿ ಹೆಚ್ಚಿನ ಉಪಚಾರವು ಬೇಕಾಗಿಲ್ಲ; ಆದರೆ, ಅರಣ್ಯವಾಸಿಗಳಾದ ನಾವು ರಥಸಂಚಾರದಲ್ಲಿ ಪಳಗಿದವರಲ್ಲವಷ್ಟೆ!

ಸುಮಂತ್ರ—ವೀರಕುಮಾರನೆ, ನೀನು ದರ್ಪಸೌಜನ್ಯಗಳೆರಡರಲ್ಲಿಯೂ ಬೇಕಾದಂತೆ ವರ್ತಿಸಲು ಬಲ್ಲವನಾಗಿರುವೆ. ಇಂತಹ ನೀನು ಇಕ್ಷ್ವಾಕುವಂಶದ ಮಹಾರಾಜನಾದ ಶ್ರೀರಾಮಚಂದ್ರನ ದೃಷ್ಟಿಗೆ ಗೋಚರಿಸುತ್ತಿದ್ದೆಯಾದರೆ, ಆತನ ಹೃದಯದಲ್ಲಿ ಸ್ನೇಹರಸವು ಉಕ್ಕಿ ಹರಿಯು ಬಹುದಾಗಿದ್ದಿತು.

ಲವ—ಆರ್ಯನೆ, ಆ ರಾಜರ್ಷಿಯು ಬಹಳ ಒಳ್ಳೆಯವನೆಂದು ಕೇಳಿರುವೆವು. (ಲಜ್ಜಿತನಾಗಿ) ಆದರೆ—

— ಚಂಪಕಮಾಲೆ —

ಅಹಿತರಿವೆಂದು ಭಾವಿಸದಿರಾ ಮಖವೈರಿವಿಘಾತಿಯೊಳ್ಮಹಾ
ಮಹಿಮನ ಪೆರ್ಮೆಗಾರೆರಗರೀ ವಸುಧಾತಳದಲ್ಲಿ ನಲ್ಕಮಿಂ— ।
ದಹಮೆನಲುಬ್ಬಿ ರಾಜಕುಲಮಂ ಕಡೆಗಣ್ಚಿ ತುರಂಗರಕ್ಷಕ
ರ್ದಹಿಸುವ ರೀತಿಯಿಂದೊರೆದ ಮಾತಿಗಿದೋ ಮುಳಿದೆದ್ದು ಬಂದೆವಾಂ
॥ ೨೮ ॥

ಚಂದ್ರಕೇತು—ಏನು? ನಮ್ಮ ಹಿರಿಯ ತಂದೆಯ ಪ್ರತಾಪವನ್ನು ಕೇಳುವುದರಲ್ಲಿಯೂ ನಿನಗೆ ಸಹನೆಯಿಲ್ಲವೆ?

ಲವ—ರಾಜಕುಮಾರನೆ, ನನಗೆ ಸಹನೆಯಿರಲಿ; ಇಲ್ಲದೆಹೋಗಲಿ; ನಿನ್ನೊಡನೆ ಬೇರೊಂದು ವಿಚಾರವಾಗಿ ಕೇಳಬೇಕೆಂದಿರುವೆನು. "ಆ ರಘುವಂಶೋತ್ಪನ್ನನು ಜಿತೇಂದ್ರಿಯನೆಂದೂ, ನಿಗರ್ವಿಯೆಂದೂ ಕೇಳಿರುವೆವು. ಆದುದರಿಂದ ಆತನಾಗಲಿ, ಆತನ ಪ್ರಜೆಗಳಾಗಲಿ ಯಾರೊಬ್ಬರೂ ಗರ್ವಪಡುವುದಿಲ್ಲವಂತೆ" ಹೀಗಿರಲು ಆತನ ಸೈನಿಕರು ರಾಕ್ಷಸೋಕ್ತಿಯನ್ನಾಡಲು ಕಾರಣವೇನು?

ಕಂ॥ ಉರುದೃಪ್ತೋನ್ಮತ್ತರ್ಕಳ
ಗರುವದ ನುಡಿ ರಾಕ್ಷಸೋಕ್ತಿ ಮುನಿಮತದಿಂದಂ ।
ಸ್ಥಿರಮೆನಿಪ ವೈರಕಂ ಮೇಣ್
ಪರಿಭವಕಂ ಹೇತುವಾಗಿ ಪರಿಣಮಿಪುದದೇ ॥ ೨೯ ॥

ಎಂಬುದಾಗಿ ಆ ಕಟೂಕ್ತಿಯನ್ನು ನಿಂದಿಸುವರು. ಹಾಗೆಯೇ ಪ್ರಿಯವಚನವನ್ನು ಮಿಗಿಲಾಗಿ ಶ್ಲಾಘಿಸುವರು—

— ಮತ್ತೇಭವಿಕ್ರೀಡಿತ —

ಹಿತಮಂ ಸಾಧಿಸಿ ಕೀರ್ತಿಯಂ ಗಳಿಸುತುಂ ದುರ್ಭಾಗ್ಯಮಂ ನೀಗುತುಂ
ಸತತಂ ನಲ್ಮೆಯೊಡರ್ಚಿ ಸೂತ್ತ ಹಿತರಂ ಬಾರಿಪ್ಪುದಾ ಸಾಧುಸೂ— ।
ನೃತಮೇ ಮಂಗಳಮಾತೆ ತಾನೆ ನಿರುತಂ ಸಂಶುದ್ಧಿಯಾ ದೇವಿಯೆಂ
ದತಿವಿಶ್ವಸದೆ ಪ್ರೊರ್ದಿ ಸಾಧುಜನರಾರಾಧಿಪ್ಪರಾ ವಾಣಿಯಂ ॥ ೩೦ ॥

**ಸುಮಂತ್ರ**—ವಾಲ್ಮೀಕಿಶಿಷ್ಯನಾದ ಈ ಕುಮಾರನ ಸ್ವಭಾವವು ಅತ್ಯಂತಪರಿಶುದ್ಧವಾಗಿದೆ. ಋಷಿಪುಂಗವನಿಂದ ಹೊಂದಿದ ಸಂಸ್ಕಾರವುಳ್ಳ ಮಾತುಗಳನ್ನೇ ಆಡುತ್ತಿದ್ದಾನೆ.

**ಲವ**—ಎಲೈ ಚಂದ್ರಕೇತುವೆ, "ಹಿರಿಯ ತಂದೆಯ ಪರಾಕ್ರಮಾತಿಶಯದಲ್ಲಿಯೂ ನಿನಗೆ ಕೋಪವೆ" ಎಂದು ಕೇಳಿದೆಯಷ್ಟೆ? ಆದರೆ, ಕ್ಷಾತ್ರಧರ್ಮವು ಒಬ್ಬನಲ್ಲೇ ನಿಯಮಿತವಾಗಿರುವುದೋ ಏನು?

**ಸುಮಂತ್ರ**—ತರಳನೆ, ಇಕ್ಷ್ವಾಕುವಂಶೋತ್ಪನ್ನನಾದ ರಾಮಸ್ವಾಮಿಯ ಪ್ರತಾಪಾತಿಶಯವನ್ನು ನೀನರಿಯೆ; ಆದುದರಿಂದ ಸುಮ್ಮನಿರು. ಅಧಿಕಪ್ರಸಂಗವೇನೂ ಬೇಕಾಗಿಲ್ಲ!

**ಕಂ॥** ಪೊಡವಿಪನ ಸೇನೆಯಂ ನೀಂ
ಕೆಡಪಿದ ವೀರನೆ ನಿಜಂ ಕುಮಾರಕ ಕೇಳಾ— ।
ದೊಡೆ ಭೃಗುರಾಮನ ದರ್ಪಿಸಿದ
ಪೊಡವಿಪನಂ ರಾಮಚಂದ್ರನಂ ಕೆಡೆನುಡಿವಾ? ॥ ೩೧ ॥

**ಲವ**—(ನಗುತ್ತ) ಆರ್ಯನೇ, ರಘುರಾಮನು ಭೃಗುರಾಮನನ್ನು ಗೆದ್ದಿರುವನೆಂದು ಘೋಷಿಸಲೇನಿದೆ—

**ಕಂ॥** ದ್ವಿಜರ ಬಲಂ ಬಾಯೊಳ್ಬಾ
ಹುಜರ ಬಲಂ ತೋಳ್ಗಳಲ್ಲಿ ಮೆರೆವುದು ಸಹಜಂ ।
ದ್ವಿಜನಾಯುಧಮೆತ್ತಿರೆ ಭೂ
ಭುಜನವನಂ ಗೆಲ್ದೊಡಲ್ಲಿ ಪೆರ್ಮೆಯದೇನೋ? ॥ ೩೨ ॥

**ಚಂದ್ರಕೇತು**—(ಕೋಪೋದ್ರೇಕದೊಡನೆ) ಆರ್ಯಸುಮಂತ್ರನೇ, ಸಾಕು! ಸಾಕು! ಈತನಿಗೆ ಪ್ರತ್ಯುತ್ತರಕೊಡಬೇಕಾಗಿಲ್ಲ.

— **ಶಾರ್ದೂಲವಿಕ್ರೀಡಿತ** —

ಆವಂಗಾ ಭೃಗುರಾಮನುಂ ಪರಿಕಿಸಲ್ಕಾಂ ವೀರನಲ್ಲಲ್ತು ಮ
ತ್ತಾವಂಗಾ ಭುವನಾವನಾಧ್ವರದ ಕಾರ್ಯಾಧ್ಯಕ್ಷನಾ ರಾಮನುಂ ।
ಆವಂಗಾ ಜಗದೇಕವೀರನ ಚರಿತ್ರಂ ನೋಡೆ ಸಾಮಾನ್ಯಮಾ
ಯ್ತಾವೀರಂ ಪುರುಷಾವತಾರನೆನಿಪಂ ದುರ್ವಾರವೀರ್ಯಂ ಗಡಾ ॥ ೩೩ ॥

ಲವ—ರಾಜಕುಮಾರನೆ, ರಘುಪತಿಯ ಚರಿತ್ರೆಯನ್ನೂ ಮಹಿಮೆ ಯನ್ನೂ ಕೂಡ ತಿಳಿಯದವರಾರು? ಆದರೆ, ಆ ವಿಷಯದಲ್ಲಿ ಹೇಳಿಕೊಳ್ಳ ತಕ್ಕ ಅಂಶವಿದೆ. ಇರುವುದನ್ನು ಆಡಿಕೊಳ್ಳುವುದರಲ್ಲಿ ದೋಷವೇನೂ ಇರಲಾರದಷ್ಟೆ!

— ಚಂಪಕಮಾಲೆ —

ಪಿರಿಯರವರ್ನಿಜಂ! ನುಡಿಯಲಾಗದು ಪೆರ್ಮೆಯ ಸಚ್ಚರಿತ್ರೆಯಂ!
ಜರುಗಿದ ತಾಟಕಾಮಥನದಿಂ ನೆರೆದಿರ್ಪುದು ಕೀರ್ತಿಯೆತ್ತಲುಂ।
ಖರರಣದಲ್ಲಿ ಮೂರಡಿ ಮರಳ್ದು ನೆಗಳ್ದಿರೆ ವೀರದಲ್ಲಣ
ಮರೆಯಿಸಿ ವಾಲಿಯಂ ಕೆಡಪಿದಂದದ ಭಂಡಣದಲ್ಲಿ ಕೋವಿದರ್

॥ ೩೪ ॥

ಚಂದ್ರಕೇತು—ಧೂರ್ತನೆ, ಮರ್ಯಾದೆಯ ಮೇರೆಯನ್ನೇ ಮೀರಿ ನಮ್ಮ ಹಿರಿಯರಲ್ಲಿ ಅಪವಾದವನ್ನು ಕಲ್ಪಿಸುವೆಯಲ್ಲ!

ಲವ—ಈ ಚಂದ್ರಕೇತುವು ನನ್ನೊಡನೆ ಬದ್ಧಭ್ರುಕುಟಿಯಾದನು.

ಸುಮಂತ್ರ—ಈ ಕುಮಾರಕರ ಕೋಪಾಟೋಪವು ಪ್ರಕಟ ವಾಯಿತು. ಅದು ಹೇಗೆಂದರೆ—

— ಚಂಪಕಮಾಲೆ —

ಮಿಗಿಲೆನೆ ಶೌರ್ಯಮಂ ಪ್ರಕಟಿಪೀ ಕುವರರ್ಕಳ ವಕ್ತ್ರವೀಕ್ಷಿಸ
ಲ್ಬಗೆ ಮಿಗೆ ರೋಷದಿಂ ನಡುಗೆ ಕಟ್ಟಿದ ಕೇಶಭರಂ ಸಡಿಲ್ದಿರಲ್ ।
ಬಿಗಿದಿರೆ ಪುರ್ಬು ನೇತ್ರಮದೊ ಕೋಕನದಚ್ಛದದಂತೆ ಕೆಂಪುಗ
ಲ್ಬಗೆಗೆ ಕಲಂಕಿಚಂದ್ರನೊ! ಚಲದ್ಭ್ರಮರಾಬ್ಜವೊ! ಎಂದು ತೋರ್ಪುದೈ

॥ ೩೫ ॥

ಲವ—ಚಂದ್ರಕೇತುಕುಮಾರನೆ, ಬಾ! ಬಾ! ಯುದ್ಧರಂಗಕ್ಕೇ ತೆರಳೋಣ. (ಎಂದೆಲ್ಲರೂ ಹೊರಟು ಹೋಗುವರು)

ಇಂತಿದು ಕುಮಾರವಿಕ್ರಮವೆಂಬ
ಪಂಚಮಾಂಕಂ.

## — ಷಷ್ಠಾಂಕಂ —

(ಬಳಿಕ ರೂಪಸಂಪನ್ನರಾದ ವಿದ್ಯಾಧರದಂಪತಿಗಳು ವಿಮಾನಾರೂಢರಾಗಿ ಪ್ರವೇಶಿಸುವರು)

**ವಿದ್ಯಾಧರ**—ಪ್ರೇಯಸಿ, ಇದೆಂತಹ ಅದ್ಭುತವೊ! ಆಕಸ್ಮಿಕವಾಗಿ ಸಂಗರದಲ್ಲಿ ಕುಪಿತರೂ ಸೂರ್ಯವಂಶೋತ್ಪನ್ನರೂ ಆದ ಈ ಕುಮಾರರ ವಿಕ್ರಮಾತಿಶಯಗಳು ಅದ್ಭುತಕರಗಳಾಗಿರುವುದರಿಂದ ದೇವಾಸುರರೆಲ್ಲರೂ ಭ್ರಮಿಸುತ್ತಿರುವುದನ್ನು ನೋಡಿದೆಯ!

**ಕಂ॥** ಚಲಿಪ ಶಿಖಾಭರದಿಂ ಪ್ರೋ!—
ದ್ವಲಯಿತಾಕೃತಚಾಪಯಂತ್ರಘೋಷದ ಕೂರ್ಪಿಂ ।
ಜ್ವಲಿಪ ಶರವೃಷ್ಟಿಕೋಲಾ
ಹಲದಿಂ ಭುವನಾದ್ಭುತಂ ಕುಮಾರರ ಯುದ್ಧಂ ॥ ೧ ॥

ಇವರಿರ್ವರ ಮಂಗಳಮಂ
ಭುವನಂ ಕೊಂಡಾಡಲೊಗೆದ ಧುಂ ಧುಂ ಧ್ವನಿವೊಲ್ ।
ನವಜಲಧರನಾದಮೆನ
ಲ್ದಿವದಿಂ ದುಂದುಭಿಸಿನಾದಮುಣ್ಮುಗುಮಿಾಗಳ್ ॥ ೨ ॥

ಆದುದರಿಂದ ನಾವೀಗಲೇ ಈ ವೀರಕುಮಾರರ ಮೇಲೆ ಅರಳಿದ ಹೊಂದಾವರೆಗಳಿಂದಲೂ, ಕಲ್ಪವೃಕ್ಷಗಳ ಬಿರಿಮುಗುಳುಗಳಿಂದಲೂ ಸುರಿಯುವ ಮಕರಂದಾಸಾರಗಳುಳ್ಳ ಪುಷ್ಪವೃಷ್ಟಿಗಳನ್ನು ಸುರಿಸೋಣ!

**ವಿದ್ಯಾಧರಿ**—ಪ್ರಿಯನೆ, ಇದೇನು! ಪಕ್ಕನೆ ಆಕಾಶವು ಮಿಂಚುಗಳ ಹೊಳಪಿನಿಂದಲೋ ಎಂಬ ಹಾಗೆ ಹೊಂಬಣ್ಣದಿಂದ ಪರಿವರ್ತನೆಹೊಂದುತ್ತಿದೆಯಲ್ಲ!

**ವಿದ್ಯಾಧರ**—ಪ್ರಿಯೆ, ಅತಿಭೀಕರವಾಗಿ ತೋರುತ್ತಿದೆಯಪ್ಪ!

**ಕಂ॥** ಇದು ವಿಶ್ವಕರ್ಮಶಾಣೆಯಿ
ನೊದವಿದ ಮಾರ್ತಂಡಮಂಡಲದ್ಯುತಿಯುಲ್ಮಿಂ ।

ತಿದು ಹರನಘಾಲನೇತ್ರದೆ
ಪುದಿದ ಜ್ವಾಲಾಕಲಾಪಮುಲ್ಲಂ ಒಗೆಯಲ್ ॥ ೩ ॥

ಮತ್ತಿನ್ನೇನಾಗಿರಬಹುದು? (ಯೋಚಿಸಿ) ಆಹಾ! ತಿಳಿಯಿತು. ಕಡುಮುಳಿದ ಚಂದ್ರಕೇತುಕುಮಾರನು ಪ್ರಯೋಗಿಸಿದ ಅಸಮಾನವಾದ ಆಗ್ನೇಯಾಸ್ತ್ರವಿದು. ಆದುದರಿಂದ ಅಗ್ನಿವೃಷ್ಟಿಯು ಶರಸಂಪಾತಗಳು ನಿರಂತರವಾಗಿ ಸುರಿಯುತ್ತಿರಲು—

ಕಂ॥ ಸರಿಯಲ್ವಿಮಾನಮಂಡಲ
ಮರರೇ ಬರ್ಬರಿಸಿ ಚಾಮರಂಗಳೊಳಾ ಕೇ– ।
ಸುರಿಯಡರ್ದಾ ಧ್ವಜಪಟಗಳ
ನುರಿಪುತೆ ವಿಕಸಿತಪಲಾಶತರುವೆನೆ ತೋರ್ಕುಂ ॥ ೪ ॥

ಪರಮಾಶ್ಚರ್ಯವು! ಒಡೆಯುತ್ತಿರುವ ಸಿಡಿಲಿನ ಖಂಡಗಳಂತೆ ಕಠೋರವಾಗಿ ಮೊಳಗುತ್ತ ಜ್ವಾಲಾಸಮೂಹಗಳಿಂದ ಪ್ರಜ್ವಲಿಸುತ್ತ ಭಯಂಕರವಾಗಿ ನಾಲ್ಕು ಕಡೆಗಳಿಂದಲೂ ವ್ಯಾಪಿಸುತ್ತಿರುವ ಅಗ್ನಿಯು ದುಸ್ಸಹವೇ ಸರಿ. ಆದುದರಿಂದ ನಾನೀಗ ಪ್ರಿಯೆಯನ್ನು ಉತ್ತರಿಗೆಯಿಂದ ಮುಸುಕಿ ಬಹುದೂರ ಕೊಂಡೊಯ್ಯುವೆನು (ಎಂದು ಹಾಗೆಯೇ ಮಾಡುವನು).

ವಿದ್ಯಾಧರಿ— ಕಾಂತನೆ, ಅಗ್ನಿಜ್ವಾಲೆಗಳಿಂದ ಸಂತಪ್ತವಾಗಿ ವೇದನೆಯ ಅನುಭವವನ್ನು ಉಂಟುಮಾಡುತ್ತಿದ್ದ ನನ್ನ ದೇಹಕ್ಕೆ ಅದೃಷ್ಟವಶದಿಂದ ಮುಕ್ತಾಫಲದಂತೆ ಶೀತಲಸ್ನಿಗ್ಧವಾಗಿ ಮೆರೆಯುತ್ತಿರುವ ನಿನ್ನ ದೇಹಸ್ಪರ್ಶದಿಂದ ನೆಮ್ಮದಿಯುಂಟಾಯಿತು.

ವಿದ್ಯಾಧರ—ಪ್ರಿಯೆ, ನಾನಿಲ್ಲಿ ನಿನಗೆ ಮಾಡಿದ ಉಪಕಾರವೇನೂ ಇಲ್ಲ; ಅಥವಾ ಹಾಗೆ ಹೇಳುವುದರಿಂದ ಪ್ರಯೋಜನವೇನು?

ಕಂ॥ ಸ್ವಸುಖಂಗಳಿಂದೆ ಪ್ರಿಯಜನ
ವ್ಯಸನಂಗಳನಂತೆ ನಿರಸಿಪರ್ ಪ್ರಿಯರೆನ್ನಲ್ ।
ವಸುಮತಿಯೊಳಾರ್ಗೆ ಪ್ರಿಯರಾ
ರಸಮಾನದ ಮರ್ದನಂತೆಯುವರವರ್ಗೆಂದುಂ ॥ ೫ ॥

ವಿದ್ಯಾಧರಿ——ಪ್ರಿಯನೆ, ಇದೇನು! ಅಕಸ್ಮಾತ್ತಾಗಿ ಅಂತರಿಕ್ಷವು ದಟ್ಟವಾಗಿ ಎಡೆಬಿಡದೆ ಚಲಿಸುತ್ತಿರುವ ಮಿಂಚುಗಳ ವಿಲಾಸದಿಂದ ಕೂಡಿದವುಗಳಾಗಿ ಮತ್ತಮಯೂರಕಂಠಗಳಂತೆ ಶ್ಯಾಮಲಗಳಾಗಿ ತೋರುವ ಮೇಘಗಳಿಂದ ಆವೃತವಾಗುತ್ತಿರುವುದಲ್ಲ!

ವಿದ್ಯಾಧರ——ಪ್ರಿಯೆ, ಇದು ಕುಮಾರನಾದ ಲವನು ಪ್ರಯೋಗಿಸಿದ ವಾರುಣಾಸ್ತ್ರದ ಪ್ರಭಾವವೇ ಸರಿ! ನಿರಂತರವಾದ ವಾರಿಧಾರಾಸಂಪಾತದಿಂದ ಆಗ್ನೇಯಾಸ್ತ್ರವು ಶಾಂತವಾದುದು.

ವಿದ್ಯಾಧರಿ—ಇದು ನನಗೆ ಪ್ರಿಯವಾದುದು.

ವಿದ್ಯಾಧರ—ಹಾ ಕಷ್ಟವೇ! "ಎಲ್ಲವೂ ಅತಿಯಾದರೆ ದೋಷವನ್ನೇ ಉಂಟುಮಾಡುವುದು" ಎಂಬ ಮಾತಿಗೆ ಅನುಸಾರವಾಗಿ ಈಗ ಪ್ರಪಂಚದಲ್ಲಿರುವ ಜೀವಜಾಲಗಳೆಲ್ಲವೂ ಪ್ರಳಯಕಾಲದ ವಾಯುವಿನಿಂದ ಕ್ಷುಬ್ಧಗಳಾಗಿ ಗುಡುಗುಡೆಂದು ಗಂಭೀರವಾಗಿ ಮೊಳಗುತ್ತಿರುವ ಮೋಡಗಳ ಕವಿಯುವಿಕೆಯಿಂದ ಉಂಟಾದ ದಟ್ಟವಾದ ಕತ್ತಲೆಯಿಂದ ಬಲವಾಗಿ ಬಿಗಿದು ಕಟ್ಟಲ್ಪಟ್ಟವರಂತೆಯೂ, ಬ್ರಹ್ಮಾಂಡವನ್ನು ಒಂದೇ ಬಾರಿಗೆ ಕಬಳಿಸಿದುದರಿಂದ ಎತ್ತರತಗ್ಗಾಗಿ ಭಯಂಕರವಾಗಿರುವ ಕಾಲಮೃತ್ಯುವಿನ ಮುಖಕಂದರದಲ್ಲಿ ಹೊರಳುತ್ತಿರುವಂತೆಯೂ, ಯುಗಾಂತದಲ್ಲಿ ಯೋಗನಿದ್ರೆಯಿಂದ ನಿರುದ್ಧಗಳಾದ ಸರ್ವದ್ವಾರಗಳುಳ್ಳ ವಿಶ್ವಂಭರನ ಉದರವನ್ನು ಪ್ರವೇಶಿಸುತ್ತಿರುವಂತೆಯೂ ಕಂಗೆಟ್ಟು ತತ್ತರಿಸುತ್ತಿವೆಯಲ್ಲಾ! ಭಲೆ! ಚಂದ್ರಕೇತುವೆ, ನೀನೀಗ ವಾಯವ್ಯಾಸ್ತ್ರವನು ಪ್ರಯೋಗಿಸಿರುವುದು ಬಲು ಚೆನ್ನಾಯಿತು. ಯಾಕೆಂದರೆ—

ಕಂ॥ ಪರಮಾರ್ಥಜ್ಞಾನಸಮಂ
ಮರುತಂ ತೋರ್ಪಿ‌ರ್ ವಿವರ್ತರೂಪದ ಘನಮಂ ।
ಪರಿಹರಿಪುದೆಲ್ಲಮಂ ತಾಂ
ಪರಮಾತ್ಮನೊಳಿರದೆ ಲೀನಮಾಗಿಪ ತೆರದಿಂ ॥ ೬ ॥

ವಿದ್ಯಾಧರಿ—ಪ್ರಿಯನೆ ಇತ್ತ ನೋಡು! ಮೇಲಕ್ಕೆ ಎತ್ತಿದ ಕೈಯಿಂದ ಉತ್ತರಿಗೆಯನ್ನು ಬೀಸಿಕೊಳ್ಳುತ್ತ, ಬಹುದೂರದಿಂದಲೇ ಮಧುರ

ಸ್ನಿಗ್ಧವಚನಗಳಿಂದ ಯುದ್ಧವ್ಯಾಪಾರವನ್ನು ಪ್ರತಿಷೇಧಿಸುತ್ತ, ಕುಮಾರ ಕರ ಮಧ್ಯದಲ್ಲಿ ತನ್ನ ಉತ್ತಮವಾದ ವಿಮಾನವನ್ನು ಇಳಿಸುತ್ತಿರುವ ಈ ಮಹಾಪುರುಷನು ಯಾವನಾಗಿರಬಹುದೋ ತಿಳಿಯದು.

ವಿದ್ಯಾಧರ—ಪ್ರಿಯೆ, ಇವನು ಶಂಬೂಕನೆಂಬ ಶೂದ್ರತಪಸ್ವಿಯನ್ನು ಸಂಹರಿಸಿ ಬಂದಿರುವ ಶ್ರೀರಾಮಚಂದ್ರನು—

ಕಂ॥ ಪಿರಿಯನ ವಚನಮನಾಲಿಸಿ
ಗುರುಭಾವದೆ ಲವನೆ ರಣಮನುಪಸಂಹರಿಸಲ್ ।
ಶಿರವೆರಗಿದನಾ ಲಕ್ಷ್ಮಣಿ
ದೊರೆಗೀಗುಂ ಸುತಸಮಾಗಮಂ ಮಂಗಳಮಂ ॥ ೭ ॥

ಆದುದರಿಂದ ಈಗಲೇ ನಾವಿಲ್ಲಿಂದ ತೆರಳೋಣ.

(ಎಂದು ಹೊರಟು ಹೋಗುವರು.)

ಇಂತಿದು ಮಿಶ್ರವಿಷ್ಕಂಭಂ

---

(ಬಳಿಕ ರಾಮನೂ ಲವನೂ ವಿನತನಾದ ಚಂದ್ರಕೇತುವೂ ಪ್ರವೇಶಿಸುವರು)

ರಾಮ— (ಪುಷ್ಪಕವಿಮಾನದಿಂದ ಇಳಿಯುತ್ತ ಚಂದ್ರಕೇತುವನ್ನು ಕುರಿತು.)

— ಮತ್ತೇಭವಿಕ್ರೀಡಿತ —

ಇನವಂಶಾಬ್ಧಿಸುಧಾಂಶು ಬಾ! ತರಳ ಬಾರಾ! ಚಂದ್ರಕೇತೂ ವಿನೀ-
ತನೆ ನೀಂ ತಂದೆಯೆನುತ್ತೆ ಬಂದು ಪಿಡಿಯುತ್ತಾಲಿಂಗಿಸೌ ಗಾಢದಿಂ ।
ತನುಜಾತಾ ಹಿಮಬಿಂದುಶೀತಮೆನಿಪಾ ನಿನ್ನಂಗಸಂಸರ್ಗದಿಂ
ದೆನತೀ ಚಿತ್ತದ ದಾಹಮಾರ್ಗೆ ಮನಕ್ಕಾನಂದಮಪ್ಪಂದದಿಂ ॥ ೮ ॥

(ಎಂದು ಹೇಳುತ್ತ ಆನಂದಬಾಷ್ಪದೊಡನೆ ವಿನತನಾಗಿದ್ದ ಚಂದ್ರಕೇತುವನ್ನು ಹಿಡಿ

ದೆತ್ತಿ ಆಲಿಂಗಿಸುತ್ತ)

ಆಯುಷ್ಮಂತನೆ, ದಿವ್ಯಾಸ್ತ್ರಗಳಿಂದ ಯುದ್ಧಮಾಡುತ್ತಿರುವ ನಿನಗೆ ಕುಶಲವಷ್ಟೆ?

**ಚಂದ್ರಕೇತು**—ತಾತನೆ, ಅತ್ಯಾಶ್ಚರ್ಯಕರನಾದ ಈ ಪ್ರಿಯಮಿತ್ರನ ಲಾಭವೆಂಬ ಶುಭೋದಯವುಂಟಾಗಿರುವ ನನಗೀಗ ಕುಶಲವೇ ಸರಿ. ತಾತನು ನನ್ನನ್ನು ನೋಡುವಂತೆಯೇ ಪ್ರಸನ್ನವೂ ಸ್ನೇಹಯುಕ್ತವೂ ಆಗಿರುವ ದೃಷ್ಟಿಯಿಂದ ಸಹಜವೀರನಾದ ಈತನನ್ನು ನೋಡಬೇಕು.

**ರಾಮ**—(ಲವನನ್ನು ಭಾವಿಸಿ ನೋಡಿ) ಪುತ್ರನಾದ ಚಂದ್ರಕೇತುವಿಗೆ ಅದೃಷ್ಟವಶದಿಂದ ಅತಿಗಂಭೀರವೂ ಸುಂದರವೂ ಶುಭಕರವೂ ಆಗಿರುವ ಆಕೃತಿಯುಳ್ಳ ಪ್ರಿಯಮಿತ್ರನು ದೊರೆತನಲ್ಲವೆ! ಆಹಾ!

— ಮತ್ತೇಭವಿಕ್ರೀಡಿತ —

ತನುವಾಂತಿರ್ಪುದೊ ಲೋಕರಕ್ಷಣೆಗೆನಲ್ಕಾನಸ್ತ್ರವೇದಂ ವಿಧಾ-
ತನ ಕೋಷಾವನಕೆಂದು ದೇಹವಡೆದೆಯ್ತಂದಿರ್ಪ ಸುಕ್ಷಾತ್ರವೋ ।
ಅನಿತುಂ ಶಕ್ತಿಸಮೂಹವೋ ಗುಣಗಣಂಗಳ್ಪೊರ್ದಿದೊಂದೈಕ್ಯವೋ
ಮನುಜಪೊರ್ದಿದ ಪುಣ್ಯಸಂಚಯಮೊ ತಾನೆಂಬಂತಿವಂ ತೋರ್ದಪಂ
॥ ೯ ॥

**ಲವ**—(ಸ್ವಗತಂ) ಆಶ್ಚರ್ಯವೆ! ಪುಣ್ಯಪ್ರಭಾವದಿಂದಲೇ ಗೋಚರಿಸತಕ್ಕ ಮಹಾತ್ಮನಿವನು—

**ಕಂ॥** ಉತ್ತಮಭಕ್ತಿಯ ನಿಲಯಂ
ಗೊತ್ತೆನಲಾಶ್ವಾಸಪ್ರಿಯತೆಗಳ್ಗೀ ಮಹಿಮಂ ।
ಉತ್ತಮಧರ್ಮಮನುಗ್ರಹ
ಚಿತ್ತದೆ ತಾಂ ಮೂರ್ತಿವೆತ್ತು ಬಂದವೊಲಿರ್ಪಂ ॥ ೧೦ ॥

ಅತ್ಯದ್ಭುತವು—

— ಶಾರ್ದೂಲವಿಕ್ರೀಡಿತ —

ವೈರಂ ನಂದಿತು ಸಂತಸಂ ಮಿಗೆ ನೆಗಳ್ದತ್ತೀಯಹಂಕಾರಮುಂ
ದೂರಂ ಸಾರ್ದುದು ನಮ್ರನಪ್ಪ ತೆರದಿಂದಂ ಶಾಂತಿಯುಂ ತಾಳ್ದಿದೆಂ ।

ಕಾರುಣ್ಯಾಕರನಂ ನಿರೀಕ್ಷಿಸುತಿದೇನಾನಸ್ವತಂತ್ರಂ ವಲಂ
ಸಾರಂ ಸಂತರ ಪೆರ್ಮೆ ತೀರ್ಥಸಮುಮೆನ್ನಲ್ಕೀತನೇ ಸಾತ್ವಿಕಂ ॥ ೧೧ ॥

ರಾಮ — ಇದೇನು? ಈತನನ್ನು ನೋಡಿ ನನ್ನ ಅಂತರಾತ್ಮವು ಹೇಳಲಶಕ್ಯವಾದ ಯಾವುದೋ ಕಾರಣದಿಂದ ದ್ರವಿಸುತ್ತಿರುವುದಲ್ಲಾ! ಅಥವಾ, ಸ್ನೇಹವು ನಿಮಿತ್ತವನ್ನು ಅಪೇಕ್ಷಿಸಿ ಉಂಟಾಗುತ್ತಿರುವುದೆಂಬುದು ಸರಿಯಲ್ಲ—

— ಚಂಪಕಮಾಲೆ —

ಅರಿಯದ ರೀತಿಯಿಂದೊಳಗಡಂಗಿದ ಹೇತುವೆ ವಸ್ತುಜಾತಮಂ
ಬೆರೆಯಿಸುಮಂತೆ ನೇಹಮದು ನೋಡದು ಬಾಹ್ಯದ ಕಾರಣಂಗಳಂ
ಅರಲ್ದಪುದಾ ಸಹಸ್ರಕಿರಣೋದಯಕಾಲಕೆ ಪುಂಡರೀಕಮುಂ
ಸುರಿಪುಗುಮಲ್ತೆ ಚಂದ್ರಶಿಲೆಯುಂ ಜಲಮಂ ಹಿಮರಶ್ಮಿಯೈತರಲ್
॥ ೧೨

ಲವ — ಚಂದ್ರಕೇತುವೆ, ಈ ಮಹಾಪುರುಷನಾರು?

ಚಂದ್ರಕೇತು — ಪ್ರಿಯಮಿತ್ರನೆ, ಇವರೇ ನಮ್ಮ ತೀರ್ಥರೂಪರು.

ಲವ — ರಾಜಪುತ್ರನೆ, ನೀನು ನನ್ನನ್ನು ಪ್ರಿಯಮಿತ್ರನೆಂದು ಕರೆದುದರಿಂದ ಧರ್ಮಾನುಸಾರವಾಗಿ ಇವರು ನಮಗೂ ತೀರ್ಥರೂಪರೇ ಸರಿ. ಆದರೆ, ಪೂಜ್ಯರೂ ರಾಮಾಯಣಮಹಾಕಾವ್ಯಕ್ಕೆ ಕಥಾನಾಯಕರೂ ಆಗಿರುವ ನಿಮ್ಮ ಹಿರಿಯರು ನಾಲ್ವರಲ್ಲವೆ? ಅವರೊಳಗೆ ಇವರಾರೆಂದು ನಾನು ಹೇಗೆ ತಿಳಿದುಕೊಳ್ಳಲಿ?

ಚಂದ್ರಕೇತು — ಇವರೇ ನಮ್ಮ ಹಿರಿಯತಂದೆಯವರು.

ಲವ — (ಉಲ್ಲಾಸದೊಡನೆ) ಏನು! ಸಾಕ್ಷಾದ್ರಘುಪತಿಯೋ! ಭಾಗ್ಯವಶದಿಂದ ಮಹಾಸ್ವಾಮಿಯವರ ದರ್ಶನವಾದುದು ನನಗೆ ಸುದಿನವೇ ಸರಿ. ಎಂದು ವಿನೀತನಾಗಿ ನೋಡುತ್ತ) ತಾತ! ವಾಲ್ಮೀಕಿಮುನಿಶಿಷ್ಯನಾದ ಲವನೆಂಬ ನಾನು ಅಭಿವಂದಿಸಿಕೊಳ್ಳುವೆನು. (ಎಂದು ಹಾಗೆಯೇ ಮಾಡುವನು.)

ರಾಮ—ಆಯುಷ್ಮಂತನೆ, ಬಾ! ಬಾ! (ಎಂದು ಸ್ನೇಹದೊಡನೆ ಆಲಿಂಗಿಸಿ) ವತ್ಸ ಅತಿವಿನಯವನ್ನು ಸಾಕುಮಾಡು. ಸುಕುಮಾರವಾದ ನಿನ್ನ ಶರೀರದಿಂದ ನನ್ನನ್ನು ಬಲವಾಗಿ ಆಲಿಂಗಿಸು:—

**ಕಂ॥** ವಿಕಸಿತಕಮಲದಲಂಬೊಲ್
ಸುಕುಮಾರಂ ಪೀನಮಂತೆ ಮಸೃಣಂ ನಿನ್ನೀ ।
ಸುಕರಾವಯವಸ್ಪರ್ಶಮಿ
ದಕಟಾ! ಕಲ್ಪಿಪುದು ಚಂದನದ್ರವದಿರವಂ ॥ ೧೩ ॥

ಲವ—(ಸ್ವಗತಂ) ಈ ಮಹಾತ್ಮರು ನನ್ನಲ್ಲಿ ನಿಷ್ಕಾರಣವಾಗಿ ಸ್ನೇಹವನ್ನು ತೋರಿಸುತ್ತಿರುವರಲ್ಲಾ! ಅಜ್ಞನಾದ ನಾನು ಇವರಿಗೆ ಇದಿರಾಗಿ ಆಯುಧವನ್ನು ಪರಿಗ್ರಹಿಸಿ ಅಪರಾಧವೆಸಗಿದೆನು. (ಪ್ರಕಾಶಂ) ತಾತಂದಿರು ಲವನ ಹುಡುಗಾಟಿಕೆಯಿಂದಾದ ಅಪರಾಧಕ್ಕಾಗಿ ಕ್ಷಮಿಸಬೇಕು!

ರಾಮ—ವತ್ಸನು ಮಾಡಿದ ಅಪರಾಧವೇನು?

ಚಂದ್ರಕೇತು—ನಮ್ಮ ಯಜ್ಞೀಯಾಶ್ವಕ್ಕೆ ಬೆಂಗಾವಲಾಗಿ ಬಂದಿರುವ ಭಟರ ಮುಖದಿಂದ ತಾತನ ಉತ್ಕರ್ಷಾತಿಶಯಗಳನ್ನು ಕೇಳಿ ಸಹಿಸಲಾರದೆ ವೀರನಿವನು ಶೌರ್ಯವನ್ನು ಪ್ರಕಟಿಸಿದನು.

ರಾಮ—ಅದು ಕ್ಷತ್ರಿಯನಿಗೆ ಅಲಂಕಾರವಲ್ಲವೆ?

**ಕಂ॥** ಧರೆಯೊಳ್ತೇಜೋವಂತಂ
ಪರತೇಜಮನೀಕ್ಷಿಸುತ್ತೆ ಸಹಿಸಂ ನಿಜಮಾ ।
ಹರಿದಶ್ವಂ ಬೆಳಗೆ ದಿವಾ—
ಕರಕಾಂತಂ ತಡೆಯದಗ್ನಿಯಂ ಪೊರಗಿಡದೇ? ॥ ೧೪ ॥

ಚಂದ್ರಕೇತು—ಈ ಮಹಾವೀರನ ಕೋಪವಾದರೂ ಶೋಭಾಯಮಾನವಾದುದು. ಈ ಗೆಳೆಯನು ವಿಕ್ರಮಾತಿಶಯದಿಂದ ಪ್ರಯೋಗಿಸಿದ ಜೃಂಭಕಾಸ್ತ್ರದ ಮೂಲಕ ನಮ್ಮ ಸೈನ್ಯವೆಲ್ಲವೂ ಸ್ತಬ್ಧವಾಗಿರುವುದನ್ನು ತಂದೆಯವರು ನೋಡಬೇಕು.

ರಾಮ—( ಅದ್ಭುತವ್ಯಸನಗಳೊಡನೆ ಭಾವಿಸಿ ನೋಡುತ್ತ ಸ್ವಗತಂ ) ಆಹಾ! ವತ್ಸನಿಗೆ ಇಂತಹ ಪ್ರಭಾವವೆ? (ಪ್ರಕಾಶಂ) ವತ್ಸಲವನೆ, ನೀನು

ಪ್ರಯೋಗಿಸಿದ ಜೃಂಭಕಾಸ್ತ್ರವನ್ನು ಉಪಸಂಹರಿಸು! ಚಂದ್ರಕೇತುವೇ, ನೀನೂ ನಿಶ್ಚೇಷ್ಟಿತರಾಗಿ ಕಂಗೆಟ್ಟಿರುವ ಸೈನಿಕರನ್ನು ಸಮಾಧಾನಪಡಿಸು!

(ಹಾಗೆಯೇ ಆಗಲೆಂದು ಲವನು ಧ್ಯಾನಮಾಡುವುದನ್ನು ಅಭಿನಯಿಸುವನು.)

ಚಂದ್ರಕೇತು--ಅಪ್ಪಣೆಯಂತೆ. (ಎಂದು ಹೊರಟು ಹೋಗುವನು)

ಲವ--ತಂದೆಯೆ, ಅಸ್ತ್ರವು ಶಾಂತವಾಯಿತು.

ರಾಮ--ವತ್ಸ! ಲವ, ರಹಸ್ಯಗಳಾದ ಜೃಂಭಕಾಸ್ತ್ರಗಳ ಪ್ರಯೋಗಗಳೂ ಉಪಸಂಹಾರಗಳೂ ಭಾಗ್ಯವಶದಿಂದ ನಿನಗೂ ತಿಳಿದಿರುವುವಲ್ಲಾ!

ಉಪಜಾತಿ॥ ಬ್ರಹ್ಮಾದಿಪುರಾತನಗುರುವರ್ಗಂ
ಬ್ರಹ್ಮಹಿತಕ್ಕೆಯೆ ನಿರವಧಿಕಾಲಂ ।
ಒಮ್ಮಾನಸದಿಂ ತಪವೆಸಗುತ್ತುಂ
ಬ್ರಹ್ಮಶರಂಗಳ ಪರಿಜಿಗೆ ಬಂದರ್ ॥ ೧೫ ॥

ಆ ಅಸ್ತ್ರವನ್ನು ಆರಾಧಿಸತಕ್ಕ ಮಂತ್ರೋಪನಿಷತ್ತನ್ನು ಭಗವಂತನಾದ ಭೃಶಾಶ್ವಮುನಿಯು ಅನೇಕಸಹಸ್ರವರುಷಗಳ ವರೆಗೂ ಶಿಷ್ಯನಾಗಿ ಸೇವೆ ಮಾಡುತ್ತಿದ್ದ ವಿಶ್ವಾಮಿತ್ರಮುನಿಗೆ ಉಪದೇಶಮಾಡಿದನು. ಬಳಿಕ ಪೂಜ್ಯನಾದ ವಿಶ್ವಾಮಿತ್ರಮುನಿಯು ನನಗೆ ಉಪದೇಶಿಸಿದನು. ಇದರ ಗುರುಪರಂಪರೆಯು ಹೀಗಿರಲು ಕುಮಾರನೇ, ನಿನಗೆ ಈ ದಿವ್ಯಾಸ್ತ್ರವನ್ನು ಉಪದೇಶಿಸಿದವರಾರು?

ಲವ—ಪೂಜ್ಯನೆ, ನಮ್ಮಿಬ್ಬರಲ್ಲಿಯೂ ಆ ಶರಗಳು ತಾವಾಗಿಯೇ ಬಂದು ಸೇರಿದುವು.

ರಾಮ—(ಯೋಚಿಸಿ) ಇರಬಹುದು. ಇದಂತೂ ಉತ್ಕೃಷ್ಟವಾದ ಪುಣ್ಯಪ್ರಭಾವದಿಂದಲೇ ಉಂಟಾದ ಮಹಿಮೆಯಾಗಿರಬೇಕು! ಆದರೆ, ನಿಮ್ಮಿಬ್ಬರಲ್ಲಿಯೂ ಎಂದು ಹೇಳಿದೆಯಲ್ಲ! ಇನ್ನಿರುವವನಾವನು?

ಲವ--ಅವಳಿಮಕ್ಕಳಾಗಿ ಜನಿಸಿದ ನಾವು ಇಬ್ಬರಿರುವೆವು.

ರಾಮ--ಹಾಗಾದರೆ ಇನ್ನೊಬ್ಬನೆಲ್ಲಿರುವನು?

(ನೇಪಥ್ಯದಲ್ಲಿ)

ದಾಂಡಾಯನನೇ—

ಕಂ॥ ಆಯುಷ್ಮಂತಂಗೆ ಲವಂ
ಗಾಯತಸಂಗರವೆ ರಾಜಸೈನ್ಯದೊಡಂ ಪೇಳ್ ।
ಕ್ಷಯಿಸುಗೆ ಭೂಪತಿಶಬ್ದಂ
ಕ್ಷಯಿಸುಗೆ ಬಾಹುಜರ ಶಸ್ತ್ರತೇಜವುಮಿಂದೇ ॥ ೧೬ ॥

ರಾಮ—ಕಂ॥ ಅನಿತಿಂದ್ರನೀಲನಿಭನಾ
ವನೊ ಗರ್ಜಿಸುತಿರ್ಪನಾ ಘನಧ್ವಾನದೆ ಮ— ।
ತ್ತನು ಪುಲಕಿತ ಮಾದಪುದೈ
ಸ್ತನಿತದೆ ಮುಕುಳಿತಕದಂಬವೃಕ್ಷದ ತೆರದಿಂ ॥ ೧೭ ॥

ಲವ—ಪೂಜ್ಯನೆ, ಕುಶನೆಂಬ ನಾಮಧೇಯವುಳ್ಳ ನಮ್ಮ ಅಣ್ಣ ನೀಗಲೇ ಭರತಾಶ್ರಮದಿಂದ ಬಂದಿರುವನು.

ರಾಮ—(ಕುತೂಹಲದೊಡನೆ) ವತ್ಸ! ಲವ, ಹಾಗಾದರೆ ಆ ಆಯುಷ್ಮಂತನನ್ನು ಇಲ್ಲಿಗೆ ಬರಮಾಡು.

ಲವ—ಅಪ್ಪಣೆಯಂತಾಗಲಿ. (ಎಂದು ಹೊರಟುಹೋಗುವನು)

(ಬಳಿಕ ಧೀರನಾದ ಕುಶನು ಧನುಷ್ಟಂಕಾರವೆಸಗುತ್ತ ಪ್ರವೇಶಿಸುವನು)

ಕುಶ— — ಮತ್ತೇಭವಿಕ್ರೀಡಿತ —

ಸುರಪಾಲಂಗಭಯಂಗಳಿತ್ತು ಕಡುದುಷ್ಟಧ್ವಾಂತಮುಂ ಬಾರಿಸು
ತ್ತಿರೆ ತಾಳ್ದಿರ್ದ ನಿಜಾಯುಧವ್ರಜಗಳಿಂ ಲೋಕಾದ್ಭುತರ್ಮೇದಿನೀ ।
ಶ್ವರರಾ ಭಾಸ್ಕರವಂಶಜಾತರವರೊಳ್ಯುದ್ಧಂ ಗಡಾ! ಧನ್ಯಮುಂ—
ತಿರಲೀ ಶಿಂಜಿನಿಯಾಂತ ಚಾಪಮೆ ಶರಜ್ವಾಲಾವಲೀ ರಾಜಿತಂ ॥ ೧೮ ॥

(ಎಂದು ಹೇಳುತ್ತ ದರ್ಪೋದ್ಧತನಾಗಿ ನಡೆತರುವನು)

ರಾಮ—ಈ ಕ್ಷತ್ರಿಯಕುಮಾರನಲ್ಲಿ ಪೌರುಷವು ಮಿತಿಮೀರಿರುವುದು. ಅದು ಹೇಗೆಂದರೆ—

— ಚಂಪಕಮಾಲೆ —

ಜಡಿಯುತುಮಾ ಶಿಲೋಚ್ಚಯುದವೊಲ್ನೆರೆಗೌರವದಿಂದೆ ಭೋಂಕನು
ಗ್ಗಡಿಪೊಡಲಾಂತ ವೀರರಸಮೋ ನಡೆತಂದಪ ದರ್ಪಮೋ ಎನಲ್ ।
ಕಡೆಗಣಿಪಂತೆ ವೀಕ್ಷಿಸುತಿಮಂ ಭುವನಾದ್ಭುತಸತ್ವವೆಲ್ಲಮುಂ
ಪೊಡವಿಯ ಮೆಟ್ಟಿ ಬಗ್ಗಿಪವೊಲುದ್ಧತನಾಗಿಯೆ ಬಂದಪಂಗಡಾ ॥ ೧೯ ॥

ಲವ—(ಸಮೀಪಿಸಿ) ಆರ್ಯನಿಗೆ ಜಯವಾಗಲಿ!

ಕುಶ—ಆಯುಷ್ಮಂತನೆ, "ಯುದ್ಧವೋ ಯುದ್ಧವು" ಎಂಬ ವಾರ್ತೆಯೇನೋ ಕೇಳಿಸಿತಲ್ಲಾ! ಅದೇನಾಯಿತು?

ಲವ—ಅದೇನೋ ಅತ್ಯಲ್ಪವಿಷಯವು. ಅದಂತಿರಲಿ! ಆರ್ಯನೀಗ ಉದ್ಧತಭಾವವನ್ನು ತೊರೆದು ವಿನಯವನ್ನು ಅವಲಂಬಿಸಬೇಕು.

ಕುಶ—ಕಾರಣವೇನು?

ಲವ—ಮಹಾಸ್ವಾಮಿಯಾದ ಶ್ರೀರಾಮಚಂದ್ರನು ಇಲ್ಲಿಗೆ ಬಂದಿರುವನು. ಅವನು ರಾಮಾಯಣಮಹಾಕಾವ್ಯದ ನಾಯಕನೂ ನಿಖಿಲ ಬ್ರಹ್ಮಾಂಡದ ಪಾಲಕನೂ ಆಗಿರುವನಲ್ಲವೆ?

ಕುಶ—ಆ ಮಹಾತ್ಮನು ಬಯಸತಕ್ಕ ಪುಣ್ಯದರ್ಶನವುಳ್ಳವನೇ ಸರಿ. ಆದರೆ, ನಾವೀಗ ಆತನನ್ನು ಹೇಗೆ ನೋಡಬಹುದು ಎಂದು ಯೋಚಿಸುತ್ತಿರುವೆನು.

ಲವ—ಗುರುಸಂದರ್ಶನದಂತೆಯೇ.

ಕುಶ—ಅದು ಹೇಗೆ?

ಲವ—ಆರ್ಯನು ಕೇಳಬೇಕು! ಉತ್ಕೃಷ್ಟಗುಣಶಾಲಿಯೂ, ಸಜ್ಜನಶಿರೋಮಣಿಯೂ ಆಗಿರುವ ಊರ್ಮಿಳಾಪುತ್ರನಾದ ಚಂದ್ರಕೇತುವೆಂಬ ರಾಜಕುಮಾರನು ನನ್ನನ್ನು ಪ್ರಿಯಮಿತ್ರನೆಂದು ಭಾವಿಸುತ್ತಿರುವುದರಿಂದ ಆ ರಾಜರ್ಷಿಯು ನಮಗೆ ಧರ್ಮಪ್ರಕಾರವಾಗಿ ತಂದೆಯಾಗುವನು.

ಕುಶ—ಧರ್ಮರೀತಿಯಿಂದ ತಂದೆಯಾಗಿರುವ ರಾಜರ್ಷಿಯೊಂದಿಗೆ ವಿನಯವನ್ನು ತೋರಿಸಿಕೊಳ್ಳುವುದರಲ್ಲಿ ದೋಷವಿಲ್ಲ.

(ಎಂದು ಅವರಿಬ್ಬರೂ ನಡೆಯುತ್ತ ರಾಮನ ಸಮೀಪಕ್ಕೆ ಹೋಗುವರು)

**ಲವ**—ಆರ್ಯನೇ, ಆಕಾರ ಅನುಭಾವ ಗಾಂಭೀರ್ಯಗಳಿಂದ ತಿಳಿದು ಬರುತ್ತಿರುವ ಉತ್ತಮಚರಿತ್ರೆಗಳುಳ್ಳ ಮಹಾಪುರುಷನನ್ನು ನೋಡುವವನಾಗು!

**ಕುಶ**—(ಸರಿಯಾಗಿ ನೋಡಿ)

**ಕಂ॥** ಸೀಮಾತೀತನ ರೂಪುಂ
ಮಾಮ್ಯೆಮನ ಪರಮಪುಣ್ಯದನುಭಾವಮುಮೇಂ।
ರಾಮಾಯಣಕವಿ ನಿಜದಿಂ
ನೇಮಿಸಿದುದು ಯುಕ್ತಮೈಸೆ ವಾಗ್ದೇವತೆಯಂ ॥ ೨೦ ॥

ತಂದೆಯೆ, ವಾಲ್ಮೀಕಿಮುನಿಶಿಷ್ಯನಾದ ಕುಶನೆಂಬ ಅಭಿಧಾನವುಳ್ಳ ನಾನು ಅಭಿವಂದಿಸಿಕೊಳ್ಳುವೆನು. (ಎಂದು ಹಾಗೆಯೇ ಮಾಡುವನು)

**ರಾಮ**—ಆಯುಷ್ಮಂತನೇ ಬಾ! ಬಾ!

**ಕಂ॥** ಸೊದೆಯಿಂದಂ ಪರಿಪೂರಿತ
ಮುದಿರಮೆನಲ್ಪೊಳೆವ ನಿನ್ನ ದೇಹಮನಿಂದಾಂ।
ಉದಿತೋತ್ಸುಕನೆಂ ವಾತ್ಸ
ಲ್ಯದಿನಾಲಿಂಗಿಸಿ ಮನಕ್ಕೆ ಸಂತಸಮೆಸಗಲ್ ॥ ೨೧ ॥

(ಆಲಿಂಗಿಸುತ್ತ ಸ್ವಗತಂ) ಆಹಾ!

— ಮಹಾಸ್ರಗ್ಧರೆ —

ಸರಸಂ ತಾಂ ಬಾಲನಾಲಿಂಗನಮಿದು ತುಹಿನಾಸಾರಮೆಂಬಂದದಿಂದಂ
ಪರಿಪೂರ್ಣಾನಂದದಂ! ಮನ್ಮನಮಿದೊದ್ರವಿಕಂಗಾಢಮಾಲಿಂಗಿಸುತ್ತು-।
ತ್ತುರಿಕುಂಸಂತಾಪಮಂ! ಭಾವಿಸಲಿವನೆನತು ಸ್ನೇಹಮೋ ರೂಪಮಾಂತೀ
ತೆರದಿಂದಂ ಬಂದುದೋ ಮತ್ತನುವಿದು ಬದಲಾಗಿರ್ಪುದೋ! ಎಂದು
ತೋರ್ಪಂ ॥ ೨೨ ॥

ಹೀಗಾಗಲು ಕಾರಣವೇನಿರಬಹುದೋ ತಿಳಿಯೆನಲ್ಲಾ!

**ಲವ**—ತಂದೆಯೆ, ಮಧ್ಯಾಹ್ನದ ಬಿಸಿಲು ಕಠಿನವಾಗಿರುವುದರಿಂದ ಈ ಮಾವಿನ ಮರದ ನೆರಳಲ್ಲಿ ಮುಹೂರ್ತಕಾಲ ವಿಶ್ರಮಿಸಿಕೊಳ್ಳಬೇಕು.

**ರಾಮ**—ವತ್ಸನ ಇಷ್ಟದಂತಾಗಲಿ!

(ಹಾಗೆಯೇ ಎಲ್ಲರೂ ಹೋಗಿ ಅವರವರ ಯೋಗ್ಯತೆಗೆ ತಕ್ಕಂತೆ ಮಾವಿನ ಮರದ ಕೆಳಗೆ ಕುಳಿತುಕೊಳ್ಳುವರು)

**ರಾಮ**—(ಸ್ವಗತಂ)

**ಕಂ॥** ಸುವಿನೀತರೆನಿಪ್ಪೊಡಮೀ
ಕುವರರ ಸದ್ವಚನವೀಕ್ಷಣಾದ್ಯನುಭಾವಂ,
ಸುವಿಶದಮೆನೆ ಸೂಚಿಕುಮಿವ
ರವನಿಯನೋರಂತೆ ಪೊರೆವರೆಂಬುದನಾಹಾ ॥ ೨೩ ॥

ಸಿತಚಂದ್ರಂ ನಿಜಕಲೆಯಿಂ
ಶತಪತ್ರಂ ಮಧುಕಣಂಗಳಿಂ ರಮ್ಯಮೆನ।
ಲ್ಕತಿಲಾವಣ್ಯಂಬೆರೆಯು
ಲ್ಕತುಲಂ ಬಾಲಕರೊಡಲ್ನಿರೀಕ್ಷಿಸಲಾಹಾ ॥ ೨೪ ॥

ಇವರಲ್ಲಿ ರಘುಕುಲೋತ್ಪನ್ನರಾದ ಕುಮಾರರ ಲಕ್ಷಣಗಳೇ ವಿಶೇಷವಾಗಿ ಕಂಡುಬರುತ್ತಿವೆ. ಹೇಗೆಂದರೆ—

— ಉತ್ಪಲಮಾಲೆ —

ಯೌವನವೇರ್ದ ಪಾರಿವದ ಕಂಠದವೋಲ್ಲತಿನೀಲದೇಹಮುಂ
ಪೀವರಸೌರಭೇಯಕಕುದಂಬೊಲೆ ವೀಕ್ಷಿಸೆ ಬಂಧುರಾಂಸಮುಂ।
ಕಾವರಗೊಳ್ಳದಿರ್ಪಮೃಗರಾಜನ ನಿಶ್ಚಲಮಾದ ನೋಟಮುಂ
ಭಾವಿಸೆ ಮಂಗಳಾಂಗರ ಗಳಧ್ವನಿಯುಂ ಶುಭಮುರ್ದಲಸ್ವನಂ ॥ ೨೫ ॥

(ಸರಿಯಾಗಿ ನೋಡಿ) ಓಹೋ! ಇವರಲ್ಲಿರುವುದು ನಮ್ಮ ವಂಶಜರ ಹೋಲಿಕೆ ಮಾತ್ರವೇ ಅಲ್ಲ—

**ಕಂ॥** ಜನಕಸುತಾರೂಪಮೆ ತಾ
ನನುಭವಕೆಯ್ತರ್ಪುದಿವರ ದರ್ಶನದಿಂ ಲೋ-।
ಚನಕಿದೊ ಗೋಚರಿಪುದು ನೂ-
ತನಕಮಲಶ್ರೀಮುದಾಸ್ಯಮಾ ಪ್ರೇಯಸಿಯಾ ॥ ೨೬ ॥

**ಕಂ॥** ದಂತಚ್ಛವಿಯಿಂ ಬೆಳಗುವು
ವಂತೆಯೆ ದಂತಚ್ಛದಂಗಳಂತೆಯೆ ಶ್ರುತಿಗಳ್ ।
ಅಂತೆಯೆ ಲೋಚನಯುಗಳವಿ
ದಂತೆಯೆಸೌಂದರ್ಯಗುಣಮುಮಾರಯಲಿವರೊಳ್ ॥೨೭॥

(ಯೋಚಿಸಿ) ಇದು ವಾಲ್ಮೀಕಿಮಹರ್ಷಿಯ ತಪೋವನದ ಪರಿಸರವಲ್ಲವೆ? ಇದರ ಬಳಿಯಲ್ಲೇ ಸೀತಾಪರಿತ್ಯಾಗವಾಗಿರಬಹುದು! ಈ ಬಾಲಕರ ಆಕೃತಿ, ವಯಸ್ಸು, ನಡೆ, ನುಡಿ ಮೊದಲಾದುವೆಲ್ಲವೂ ಅವಳಲ್ಲಿ ಇರತಕ್ಕವು ಗಳನ್ನೇ ಅನುಕರಿಸುತ್ತಿವೆ. ಜೃಂಭಕಾಸ್ತ್ರಗಳು ತಾವಾಗಿಯೇ ಬಂದು ಸೇರಿದುವಂತೆ! ಅಂದು ನಾನು ಚಿತ್ರಸಂದರ್ಶನಾವಸರದಲ್ಲಿ ಅಸ್ತ್ರಗಳನ್ನು ಉಪದೇಶಮಾಡಿದೆನಲ್ಲವೆ? ಉಪದೇಶವಿಲ್ಲದೆ ಅವು ಯಾರಿಗೂ ಎಂದೂ ಗೋಚರಿಸಲಾರವೆಂದು ಕೇಳಿರುವೆವು. ಹೀಗೆ ಆಶ್ಚರ್ಯದಲ್ಲಿ ಓಲಾಡು ತ್ತಿರುವ ನನ್ನ ಮನಸ್ಸಿಗೆ ಇದೊಂದು ಸುಖದುಃಖಾತಿಶಯರೂಪವಾದ ವಿಪ್ರಲಂಭವೇ ಸರಿ! ಆದರೆ ಅದರಲ್ಲೂ ಇವರು ಅವಳಿಮಕ್ಕಳೆಂಬ ವಿಚಾರವು ಹೆಚ್ಚಿನ ಆಶಾದಾಯಕವಾಗಿದೆ. ಮಕ್ಕಳಿಬ್ಬರನ್ನು ತಳೆದಿದ್ದಂ ತೆಯೇ ದೇವಿಯ ಗರ್ಭಚಿಹ್ನೆಯು ತೋರುತ್ತಿದ್ದಿತು. (ಕಂಬನಿಯೊಡನೆ)

— ಚಂಪಕಮಾಲೆ —

ಪರಿಚಯದಿಂದೆ ನೇಹಮಭಿವೃದ್ಧಿಯನೊಂದಿರೆಯುಂ ರಹಸ್ಯದ
ಲ್ಲುರುತರಮಾದ ಸಂಭ್ರಮಗೆಯದಿರ್ದೊಡೆಯುಂ ನಿಜಲಜ್ಜೆಯಿಂದೆ ಬೆ- ।
ಚ್ಚುರಿಸಿರೆ ದೇವಿ ತಾಂ ತಳೆದ ಗರ್ಭಮುದಿರ್ತೆರಮಿರ್ದುದೆಂಬುದಂ
ಕರತಲಮಾಡಿಸುತ್ತಿರಿದೆನಾಂ ಬಳಿಯಂ ತಿಳಿವಾದುದಾಕೆಗಂ ॥ ೨೮ ॥

(ಎಂದು ದುಃಖಿಸುತ್ತ) ಆದರೂ ನಾನೀ ಬಾಲಕರೊಡನೆ ಏನಾದರೊಂದು ಉಪಾಯದಿಂದ ಕೇಳಿ ನೋಡುವೆನು.

**ಲವ**— ತಂದೆಯೆ, ಇದೇನು!

**ಉಪಜಾತಿ॥** ಜಗದಭ್ಯುದಯಕ್ಕೆ ಹೇತುಗೀ
ಮೊಗಕಿಂದೇತಕೊ ಬಾಷ್ಪವರ್ಷಣಂ ।

ಮಿಂಗೆ ಶೋಭಿಸ ಪುಂಡರೀಕವಿಾ
ಬಗೆಯಿಂದಂ ಹಿಮವೃಷ್ಟಿಯಾಂಪುದೇ ॥ ೨೯ ॥

**ಕುಶ**— ವತ್ಸ!

— ಮತ್ತೇಭವಿಕ್ರೀಡಿತ —

ಅವನೀನಂದನೆಯಿಲ್ಲದಿರ್ಪ ರಘುಜಂಗೇಂ ಸೌಖ್ಯಮೋ ಭಾವಿಸ
ಲ್ಕವನೀಭಾಗಮೆ ಕಷ್ಟದಾಯಕಮರಣ್ಯಂಕಾಂತೆಯಾ ನಾಶದಿಂ।
ಅವರ ಸ್ನೇಹಮಮೋಘಮಿಾ ವಿರಹದುಃಖಂ ತಾನಪಾರಂ ಗಡಾ
ಲವ! ರಾಮಾಯಣಮೆಲ್ಲಮಂ ತಿಳಿದ ನೀನುಂ ಕೇಳ್ವುದೇನೀ ತೆರಂ ॥೩೦॥

**ರಾಮ**—(ಸ್ವಗತಂ) ಆಹಾ! ಇವರ ಮಾತಿನಿಂದ ಪರಿಚಯವೇನೂ ತಿಳಿಯುವಂತಿಲ್ಲ. ಆದುದರಿಂದ ಇವರೊಡನೆ ಕೇಳುವುದೇಕೆ? ಮುಗ್ಧ ಹೃದಯವೆ, ದುರ್ಲಭವಾದ ವಿಷಯವನ್ನು ಊಹಿಸುತ್ತ ಮುಂದುವರಿಯುವೆಯೇಕೆ? ಹೀಗೆ ಅನಿವಾರ್ಯವಾದ ದುಃಖಕ್ಕೆ ಗುರಿಯಾಗಿ ಬಾಲಕರ ದಯೆಗೂ ಭಾಗಿಯಾಗುತ್ತಿರುವೆಯಲ್ಲ! ಆಗಲಿ; ನಾನೀಗ ಹೇಗಾದರೂ ವ್ಯಸನದ ಸಂಗತಿಯನ್ನೇ ಮರೆಯಿಸಿಕೊಳ್ಳುವೆನು. (ಪ್ರಕಾಶಂ) ಆಯುಷ್ಮಂತರೆ, ಪೂಜ್ಯನಾದ ವಾಲ್ಮೀಕಿಮುನಿಯ ಮುಖದಿಂದ ಸೂರ್ಯವಂಶಜರ ವಿಷಯವಾಗಿ ವರ್ಣನಾತ್ಮಕವಾದ ರಾಮಾಯಣವೆಂಬ ಮಹಾಕಾವ್ಯರೂಪದಿಂದ ಸರಸ್ವತಿಯು ಅವತಾರವಾಗಿರುವುದೆಂದು ಕೇಳಿಬರುವುದು. ಅದರಲ್ಲಿ ಸ್ವಲ್ಪಭಾಗವನ್ನಾದರೂ ಕೇಳಬೇಕು ಎಂಬ ಕುತೂಹಲವು ನನ್ನನ್ನು ಪ್ರೋತ್ಸಾಹಿಸುತ್ತಿರುವುದು.

**ಕುಶ**— ಪೂಜ್ಯನೆ, ಆ ಕಾವ್ಯದ ಭಾಗವೆಲ್ಲವನ್ನೂ ನಾವು ಆವೃತ್ತಿ ಮಾಡಿರುವೆವು; ಆದರೆ, ಈಗ ಬಾಲಕಾಂಡದ ಎರಡು ಪದ್ಯಗಳು ಮಾತ್ರ ನೆನಪಿನಲ್ಲಿರುವುವು.

**ರಾಮ**— ಅವನ್ನಾದರೂ ಕೇಳೋಣ!

**ಕುಶ**—

**ಕಂ॥** ತಂದೆಯೊಡರ್ಚಿದ ಮದುವೆಯೊ
ಳಂದು ವಧೂಕರವ ಪಿಡಿದು ಮೆಚ್ಚಿದ ರಾಮಂ।

ಕುಂದದ ರೂಪಗುಣಾದಿಗ
ಳಿಂದಂ ಸೊಗಯಿಪ್ಪಳೆಂದತಿಪ್ರೀತಿಸಿದಂ ॥ ೩೧ ॥

ಅಂತವಳ್ಗಂ ಶ್ರೀರಾಮನ
ನಂತಪ್ರೇಮಕ್ಕೆ ಪಾತ್ರನೆನಿಸಿದ ದಯಿತಂ।
ತಂತಮ್ಮ ಪ್ರೀತಿಯೋಗವು
ದೆಂತೆನಲವರಿರ್ವರಂತರಂಗವೆ! ಅರಿಗುಂ ॥ ೩೨ ॥

**ರಾಮ** —ಆಹಾ! ಇದು ಅತಿದುಸ್ಸಹವಾದ ಹೃದಯಮರ್ಮಚ್ಛೇದವು. ಪ್ರಿಯೆ, ನಾವಂದು ಹಾಗೆಯೇ ಪರಸ್ಪರಪ್ರೇಮಾನುಬಂಧದಿಂದ ಏಕಹೃದಯರಾಗಿ ಇದ್ದೆವಲ್ಲ? ದೇವಿ! ನಿನ್ನ ಸಂಸಾರವೃತ್ತಾಂತಗಳು ಕೊನೆಮೊದಲಿಲ್ಲದ ವಿರಹವೇದನೆಯನ್ನು ಅನುಭವಿಸುತ್ತ ಸ್ಮರಿಸಿಕೊಳ್ಳುವ ಹಾಗಾದುವಲ್ಲಾ! ನಲ್ಲೇ!

— ಮತ್ತೇಭವಿಕ್ರೀಡಿತ —

ಅಮಿತಾನಂದಮದೆತ್ತಲೆತ್ತಲನಿತುಂ ವಿಶ್ವಾಸಬಾಹುಳ್ಯಮಿ—
ನ್ನನಿತುಂ ಪ್ರೇಮವಿವೃದ್ಧಿಯೆತ್ತಲನಿತುಂ ಸಂಸಾರಭೋಗೇಚ್ಛೆಯೆ।
ತ್ತನಿತೆಮ್ಮಾ ಸುಖದುಃಖದಲ್ಲಿ ಹೃದಯೈಕ್ಯಂ ಭಾವಿಸಲ್ಕೆತ್ತಲಿ
ನ್ನನಿತುಂ ಪಾಪದೆ ಜೀವಮಾ ಬವಣೆಯಿಂದಂ ಪೋಗದೆಂತಿರ್ಪುದೋ
॥ ೩೩ ॥

ಆಹಾ! ಕಷ್ಟವೇ!

**ಕಂ॥** ಇನೆಯಳ ಗುಣಕೋಟಿಗಳೆನಿ
ತನಿತಂ ಪ್ರಕಟೀಕರಿಪ್ಪ ಕಾಲಮಸಹ್ಯಂ।
ಮನಕಾವುದಕ್ಕುಮುದನೇ
ನೆನೆಯಿಪ ಸಂದರ್ಭಮೇತಕಕಟಾ! ವಿಧಿಯೇ ॥ ೩೪ ॥

— ಚಂಪಕಮಾಲೆ —

ಇನಿಸಿನಿಸಿರ್ದು ಮೆಲ್ಲನೆ ದಿನಂಗಳೆಯುತ್ತಿರೆ ಕಾಲದೇಳ್ಗೆಯಿಂ
ಸ್ತನಮುಕುಳಂಗಳಾ ಹರಿಣನೇತ್ರೆಗೆ ವೃದ್ಧಿಯನೆಯ್ದಿ ತೋರಿ ಯೌ—।

ವನಮನುರಾಗವಿಷ್ಟಮವೆ ಮುಪ್ಪುರಿಗೊಂಡಿರೆ ವಿಾನಕೇತನಂ
ಮನದೊಳೆ ಮೂಡಿ ಚೆಲ್ವಿನೊಡುಗೂಡುತೆ ತೋರನೆ? ಅಂದು ದೇಹದೊಳ್

॥ ೩೫ ॥

ಲವ—ಪೂಜ್ಯನೆ, ಚಿತ್ರಕೂಟಪರ್ವತದ ದಾರಿಯಲ್ಲಿರುವ ಮಂ ದಾಕಿನಿಯೆಂಬ ನದಿಯಲ್ಲಿ ವಿಹರಿಸುತ್ತಿದ್ದಾಗ ಸೀತಾದೇವಿಯನ್ನು ಉದ್ದೇ ಶಿಸಿ ಶ್ರೀರಾಮಚಂದ್ರನು ಹೇಳಿದ ಪದ್ಯವನ್ನು ಕೇಳಬೇಕು—

ಕಂ॥ ಹರಿಣಾಂಬಕಿ ನೋಡಾ! ಕೇ
ಸರಪುಷ್ಪಾಕೀರ್ಣಮಾದ ಕಲ್ಮಂಚಮಿದೀ।
ಪರಿಯಿಂ ಕುಳ್ಳಿರೆ ನಿನಗಾ
ಸರೆಯೆನೆ ತೋರ್ದಪ್ಪುದಿತ್ತ ಬಿತ್ತರದಿಂದಂ ॥ ೩೬ ॥

ರಾಮ—(ಲಜ್ಜಿಮಂದಹಾಸಸ್ನೇಹದೈನ್ಯಗಳಿಂದ ಕೂಡಿದವನಾಗಿ) ಸ್ವಾಭಾ ವಿಕವಾಗಿಯೇ ಶಿಶುಜನರು ಮುಗ್ಧರು. ಅವರಲ್ಲಿಯೂ ಅರಣ್ಯ ವಾಸಿಗಳು ಏನೊಂದೂ ಅರಿತವರಲ್ಲ! ಎಲೌ ಸೀತೇ, ನಾವಂದು ಚಿತ್ರ ಕೂಟದಲ್ಲಿ ಕ್ರೀಡಿಸುತ್ತಿದ್ದಾಗ ನಮ್ಮಿಬ್ಬರೊಳಗಣ ಪ್ರೇಮಾತಿಶಯವನ್ನು ಸ್ಮರಿಸಿಕೊಳ್ಳುವೆಯೇನು? ದೇವಿ, ನಾನಿಲ್ಲಿ ನಿನ್ನ ಅಂದಿನ—

— ಮತ್ತೇಭವಿಕ್ರೀಡಿತ —

ಬೆಮರಿಂ ನೂರ್ಮಡಿಯಾಗಿ ಶೋಭಿಸುತಿರಲ್ಮೈಗೂಡಿ ಗಂಗಾನಿಲಂ
ಶ್ರಮಮಂ ನೀಗಿಪೆನೆಂದು ಬೀಸೆ ಕೆದರ್ದಾ ಲಂಬಾಲಕಂ ಪತ್ತಿರಲ್।
ರಮಣೀಯಾಭರಣಂಗಳಿಲ್ಲದೊಡಮಾ ಕರ್ಣಂಗಳೇ ಭೂಷಿಸ
ಲ್ಕಮನೀಯಾಂಕಿತಕುಂಕುಮಂ ಕಳೆಯುಲೊಪ್ಪಿರ್ದಾಸ್ಯಮಂ ಭಾವಿಪೆಂ

॥ ೩೭ ॥

(ಸ್ತಬ್ಧನಾಗಿ ನಿಂತು ವ್ಯಸನದಿಂದ) ಆಹಾ! ಕಷ್ಟವೇ!

— ಮತ್ತೇಭವಿಕ್ರೀಡಿತ —

ಜಗದೊಳ್ಸ್ನೇಹಿಗರೆಯ್ದೆ ದೂರಕವರಂ ಬಲ್ಲಂತೆ ಜಾನಿಪ್ಪರಾ
ಬಗೆಗಂ ಕಂಡರಿವಂತೆ ತೋರ್ದವರೆ ಬಾರಿಪ್ಪರ್ಗಡಾ ಬನ್ನಮಂ।

ಜಗಮೇಜೀರ್ಣಮರಣ್ಯಮೈಸೆ ಪ್ರಿಯಪತ್ನೀನಾಶಮುಂ ಕಾಣುತುಂ
ಬಗೆ ಬೆಂದಂತೆ ತುಷಾಗ್ನಿಯಿಂದೆ ನಿರುತಂ ಗೋಳಾಟಮಿಾ ಬಾಳ್ವೆಯೇ
॥ ೩೮ ॥

(ನೇಪಥ್ಯದಲ್ಲಿ)

ಕಂ॥ ಜನಕಂ ವಾಲ್ಮೀಕಿ ವಸಿ-
ಷ್ಠನರುಂಧತಿ ಕೋಸಲೇಂದ್ರಪತ್ನಿಯರೆಲ್ಲರ್ ।
ಮನದೊಳ್ತಳಮಳಿಸಿ ತಪೋ
ವನದಿಂ ಬಂದಪ್ಪರಿತ್ತ ಶಿಶುಕಲಹಮೆನಲ್ ॥ ೩೯ ॥

**ರಾಮ**—ಓಹೋ! ಪೂಜ್ಯರಾದ ಅರುಂಧತೀವಸಿಷ್ಠರೂ ನನ್ನ ತಾಯಂದಿರೂ ಜನಕಮಹಾರಾಜನೂ ಕೂಡ ಇಲ್ಲಿರುವರೇನು? ಈ ವಿಪನ್ನಾವಸ್ಥೆಯಲ್ಲಿ ನಾನು ಅವರನ್ನೆಂತು ಸಂದರ್ಶಿಸಲಿ? (ವ್ಯಸನದೊಡನೆ ನೋಡಿ) ಆಹಾ! ಕಷ್ಟವೇ! ತಾತನಾದ ಜನಕನೂ ಕೂಡ ಇಲ್ಲಿಗೆ ಬಂದಿರುವನೆಂದರೆ ಮಂದಭಾಗ್ಯನಾದ ನನಗೆ ವಜ್ರಪಾತವಾದಂತೆಯೇ ಸರಿ!

— ಚಂಪಕಮಾಲೆ —

ಇನನಿಮಿವಂಶಜಾತರ ವಿವಾಹವ ಸಂಸ್ತುತಿಸಲ್ಗುರೂತ್ತಮ
ರ್ಗನುಜೆಯನೊಲ್ದು ಧಾರೆಯೆರೆಯುತ್ತಲೆ ತಂದೆಯ ನಾಪ್ತಮಿತ್ರನೆಂ ।
ದೆನೆ ಬಗೆದಿರ್ದ ಮಾವನನಭೀಕ್ಷಿಪೆನೀಗಳದೆಂತು ಪಾಪಿಯಾಂ!
ತನುವಿದು ಭೇದಿಕುಂ! ಬಿಡು ದುರಾತ್ಮಗೆ ರಾಮಗಸಾಧ್ಯಮಿಪ್ಪುದೇಂ?
॥ ೪೦ ॥

(ಪುನಃ ನೇಪಥ್ಯದಲ್ಲಿ)

ಆಹಾ ಕಷ್ಟವೇ!

ಕಂ॥ ಅನುಭಾವಮಾತ್ರಮಿಪ್ಪುದ
ನನುಮಾನಿಸಿ ರಾಮನೆಂದು ತಿಳಿಯಿಸೆ ಜನಕಂ ।
ಜನನಿಯರಭಿವೀಕ್ಷಿಸಿ ಪು-
ತ್ರನ ದುಸ್ಥಿತಿಗಾಗಿ ಮೂರ್ಛೆಗೊಂಡಪರಿತ್ತಲ್ ॥ ೪೧ ॥

ರಾಮ— ಕಂ॥ ನಿಮಿರಘುವಂಶೋಭಯಕಂ
ಸಮನಿಪ ಕೀರ್ತಿಗೆ ನಿದಾನೆಯಂ ಜಾನಕಿಯಂ ।
ಶಮನನೆನೆ ಕೊನೆಗೊಳಿಸಿದನೊಳ್
ಮಮತೆಯನೇಕಿಂತು ಬರಿದೆ ತೋರ್ದಪಿರಕಟಾ!
॥ ೪೨ ॥

ಕುಶಲವರು— ಪೂಜ್ಯನು ಇತ್ತಿತ್ತ ಚಿತ್ತೈಸಬೇಕು.

(ಎಂದು ವಿಷಣ್ಣರಾಗಿ ಎಲ್ಲರೂ ಹೊರಟು ಹೋಗುವರು)

ಇಂತಿದು ಕುಮಾರಪ್ರತ್ಯಭಿಜ್ಞಾನಮೆಂಬ
ಷಷ್ಠಾಂಕಂ

---

## — ಸಪ್ತಮಾಂಕಂ —

(ಬಳಿಕ ಲಕ್ಷ್ಮಣನು ಪ್ರವೇಶಿಸುವನು)

**ಲಕ್ಷ್ಮಣ**— ಇದೇನು! ಭಗವಂತನಾದ ವಾಲ್ಮೀಕಿಯು ಬ್ರಾಹ್ಮಣರು ಕ್ಷತ್ರಿಯರು ಎನ್ನದೆ ಪುರಜನರಿಂದಲೂ ದೇಶದ ಪ್ರಜೆಗಳಿಂದಲೂ ಕೂಡಿದ ನಮ್ಮನ್ನು ಕರೆಯಿಸಿರುವನು. ಅಷ್ಟುಮಾತ್ರವಲ್ಲದೆ, ತನ್ನ ಪ್ರಭಾವಾತಿಶಯದಿಂದ ಸುರಾಸುರರೂ ಚರಾಚರಗಳೆನಿಸುವ ಜೀವಜಾಲಗಳೂ ಸಹ ತನ್ನ ಸನ್ನಿಧಿಯನ್ನೆಯ್ದುವಂತೆ ಮಾಡಿರಲು ಕಾರಣವೇನಿರಬಹುದೊ? ಅಷ್ಟೇ ಅಲ್ಲದೆ ನಮ್ಮ ಅಣ್ಣನಾದ ಸ್ವಾಮಿಯು ನನ್ನನ್ನು ಕರೆದು— "ಲಕ್ಷ್ಮಣನೆ, ವಾಲ್ಮೀಕಿಯು ತನ್ನಿಂದ ವಿರಚಿತವಾಗಿ ಅಪ್ಸರಸೆಯರು ಅಭಿನಯಿಸಲಿರುವ ಕೃತಿಯೊಂದನ್ನು ನೋಡುವುದಕ್ಕಾಗಿ ನಮ್ಮೆಲ್ಲರನ್ನೂ ಸನ್ನಿಧಿಗೆ ಬರುವಂತೆ ಆಹ್ವಾನಿಸಿರುವನು. ಆದುದರಿಂದ ನೀನೀಗ ಗಂಗಾತೀರದಲ್ಲಿರುವ ರಂಗಸ್ಥಾನವನ್ನೆಯ್ದಿ ಸಕಲಸಾಮಾಜಿಕರಿಗೂ ಒಪ್ಪುವಂತೆ ಸ್ಥಾನಗಳನ್ನು ಸಿದ್ಧಪಡಿಸಬೇಕು" ಎಂದು ಆಜ್ಞಾಪಿಸಿರುವನು. ಹಾಗೆಯೇ ನಾನೀಗ ದೇವಾಸುರರಿಗೂ ಮನುಷ್ಯರಿಗೂ ಪ್ರಾಣಿವರ್ಗಕ್ಕೂ ಕೂಡ ಯಥಾಯೋಗ್ಯವಾಗುವಂತೆ ಆಸನಾದಿಗಳನ್ನು ಸಿದ್ಧಪಡಿಸಿರುವೆನು. ಓಹೋ! ನೋಡಲು ಈಗ ತಾನೇ—

**ಕಂ॥** ಧರೆಯುಂ ಪರಿಪಾಲಿಪುದೆಂ
ಬುರುತರಕಷ್ಟದ ಮುನಿವ್ರತಂ ತನಗಿರೆಯುಂ
ಗುರುವಾಲ್ಮೀಕಿನಿಯೋಗಕೆ
ಶಿರವಾಗುತಲಾರ್ಯನಿತ್ತಲೆಯ್ತಂದಪನಯ್ ॥ ೧ ॥

(ಬಳಿಕ ರಾಮನು ಪ್ರವೇಶಿಸುವನು)

**ರಾಮ**— ವತ್ಸ ಲಕ್ಷ್ಮಣ! ಸಭಾಸದರೆಲ್ಲರೂ ಬಂದು ನೆರೆದಿರುವರೇನು?

**ಲಕ್ಷ್ಮಣ**— ಹೌದು. ಸಮಸ್ತರೂ ಬಂದು ಸೇರಿರುವರು.

**ರಾಮ**—ಕುಶಲವರೆಂಬ ಈ ಬಾಲಕರಾದರೂ ಚಂದ್ರಕೇತು ಕುಮಾರನಂತೆಯೇ ನಮ್ಮ ವಾತ್ಸಲ್ಯವನ್ನು ಪಡೆಯುವುದಕ್ಕೆ ಅರ್ಹರಾಗಿರುವರು.

**ಲಕ್ಷ್ಮಣ**—ಪ್ರಭುವಾತ್ಸಲ್ಯಕ್ಕೆ ಒಳಗಾಗಿರುವ ಅವರಲ್ಲಿ ನಾವೆಲ್ಲರೂ ಹಾಗೆಯೇ ವರ್ತಿಸಿರುವೆವು. ಇದೋ! ರಾಜಾಸನವು ಸಿದ್ಧವಾಗಿರುವುದು. ಸ್ವಾಮಿಯು ಕುಳಿತುಕೊಳ್ಳಬೇಕು.

**ರಾಮ**—ಹಾಗೆಯೇ ಆಗಲಿ. (ಎಂದು ಕುಳಿತುಕೊಂಡು) ನಾಟ್ಯಾಚಾರ್ಯನೆ, ಅಭಿನಯವು ಪ್ರಾರಂಭವಾಗಲಿ!

**ಸೂತ್ರಧಾರ**—(ಪ್ರವೇಶಿಸಿ) ಪೂಜ್ಯನೂ ಯಥಾರ್ಥವಾದಿಯೂ ಆಗಿರುವ ವಾಲ್ಮೀಕಿಮುನಿಯು ಸ್ಥಾವರಜಂಗಮರೂಪವಾದ ಜಗತ್ತನ್ನು ಕುರಿತು—"ನಾನು ಜ್ಞಾನದೃಷ್ಟಿಯಿಂದ ಸರಿಯಾಗಿ ನಿರೀಕ್ಷಿಸಿಕೊಂಡು, ಲೋಕಪಾವನವೂ ವಚನಾಮೃತವೂ ಕರುಣಾದ್ಭುತರಸಯುಕ್ತವೂ ಆಗಿರುವಂತೆ ರಚಿಸಿರುವ ನಾಟಕವನ್ನು ನೀವೆಲ್ಲರೂ ಏಕಾಗ್ರಚಿತ್ತರಾಗಿ ಗೌರವದಿಂದ ನೋಡಬೇಕು" ಎಂದು ಆಜ್ಞಾಪಿಸಿರುವನು.

**ರಾಮ**—ಸಭಾಸದರೆಲ್ಲರೂ ಕೇಳಬೇಕು—"ಲೋಕದಲ್ಲಿ ಮಹರ್ಷಿಗಳು ಸೂಕ್ಷ್ಮವಾದ ಧರ್ಮಸ್ವರೂಪವನ್ನು ಕಂಡಿರುವುದರಿಂದ ಅವರ ಮಾತುಗಳು ಯಥಾರ್ಥಗಳಾಗಿರುವುವು. ಅವೆಲ್ಲಿಯಾದರೂ ಅಸತ್ಯಗಳಾಗಬಹುದೋ ಎಂದು ನೀವೆಂದಿಗೂ ಶಂಕಿಸಬಾರದು" ಎಂಬುದೇ ವಾಲ್ಮೀಕಿಮುನಿಯ ಅಭಿಪ್ರಾಯವಾಗಿರುವುದು.

(ನೇಪಥ್ಯದಲ್ಲಿ)

ಹಾ! ಆರ್ಯಪುತ್ರಾ! ಕುಮಾರಲಕ್ಷ್ಮಣಾ! ನಿರ್ಭಾಗ್ಯಳೂ, ಆಸನ್ನಪ್ರಸವವೇದನೆಯುಳ್ಳವಳೂ, ಅನಾಥೆಯೂ ಆಗಿರುವ ನನ್ನನ್ನು ಹಿಂಸ್ರಮೃಗಗಳು ತಿನ್ನಬೇಕೆಂದು ಬಯಸುತ್ತಿವೆಯಲ್ಲಾ! ಅಕಟಾ! ಮಂದಭಾಗಿನಿಯಾದ ನಾನು ಈ ದೇಹವನ್ನು ಗಂಗಾಪ್ರವಾಹದಲ್ಲಿ ಬಿಟ್ಟುಬಿಡುವೆನು.

**ಲಕ್ಷ್ಮಣ**—ಇದೇನು! ಮತ್ತೊಂದು ಗಂಡಾಂತರವೇ ಸಂಭವಿಸಿತಲ್ಲಾ!

**ಸೂತ್ರಧಾರ—**

**ಕಂ॥** ಅರಸಂ ವನಮಧ್ಯದೊಳಾ
ಧರಣಿಜೆಯಂ ತ್ಯಜಿಸೆ ಪ್ರಸವವೇದನೆಯಿಂದಂ।
ಮರುಗುತ್ತವಳಿರಲೊಲ್ಲದೆ
ಸುರನದಿಯೊಳ್ತನುವನಕಟ ತೊರೆದಪಳೀಗಳ್ ॥ ೨ ॥

(ಎಂದು ಹೊರಟು ಹೋಗುವನು)

**ಇಂತಿದು ಪ್ರಸ್ತಾವನೆ**

---

**ರಾಮ**—(ಭಯದೊಡನೆ) ದೇವಿ! ದೇವೀ! ಪುತ್ರಸಮಾನನಾದ ಲಕ್ಷ್ಮಣನನ್ನು ನೋಡಿಯಾದರೂ ಗಂಗೆಯಲ್ಲಿ ಬೀಳಬೇಡ!

**ಲಕ್ಷ್ಮಣ**—ಆರ್ಯನೇ, ಇದು ನಾಟಕವು.

**ರಾಮ**—ಅಕಟಾ! ದಂಡಕಾರಣ್ಯಪ್ರಿಯಸಖಿಯಾಗಿದ್ದ ಸೀತೇ, ನಿನಗೆ ರಾಮನಿಂದ ಇಂತಹ ದುರ್ದಶೆಯು ಪ್ರಾಪ್ತವಾಯಿತೆ?

**ಲಕ್ಷ್ಮಣ**—ಆರ್ಯನು ಮನಸ್ಸಿಗೆ ಸಮಾಧಾನತಂದುಕೊಳ್ಳಬೇಕು! ಇದು ವಾಲ್ಮೀಕಿಮಹರ್ಷಿಯ ಕೃತಿಯಲ್ಲವೆ?

**ರಾಮ**—ವಜ್ರದಂತೆ ಕಠಿನಹೃದಯನಾದ ನಾನು ಸಿದ್ಧನಾಗಿರುವೆನು. (ಬಳಿಕ ಮೂರ್ಛೆಹೊಂದಿದ ಸೀತೆಯು ಉಭಯಪಾರ್ಶ್ವಗಳಲ್ಲಿಯೂ ಅವಳಿಮಕ್ಕಳನ್ನು ತಂತಮ್ಮ ತೊಡೆಗಳಲ್ಲಿ ಮಲಗಿಸಿಕೊಂಡ ಪೃಥಿವೀಭಾಗೀರಥಿಯರಿಂದ ಲಾಲಿತಳಾಗುತ್ತಿದ್ದಂತೆಯೇ ಪ್ರವೇಶಿಸುವಳು)

**ರಾಮ**—ವತ್ಸ ಲಕ್ಷ್ಮಣ! ಲಕ್ಷ್ಮಣಾ! ಎತ್ತಣಿಂದಲೋ ಆವರಿಸುತ್ತಿರುವ ಘೋರಾಂಧಕಾರದಲ್ಲಿ ಪ್ರವೇಶಿಸುತ್ತಿರುವ ನನ್ನನ್ನು ಅವಲಂಬಿಸಿಕೊ!

**ಪೃಥಿವೀಭಾಗೀರಥಿಯರು**—

ಕಂ॥ ಕುವರಿಯೆ ತಂದುಕೊ ಚಿತ್ತ
ಕ್ಕವಧಾನಮನಿಂದು ಭಾಗ್ಯವಶದಿಂ ಜಲದೊಳ್—
ರವಿವಂಶಮನುದ್ಧರಿಸ
ಲ್ಕುವರರ ಯುಗ್ಮಮನೆ ಪೆತ್ತು ವರ್ಧಿಪೆ ಭದ್ರೇ ॥ ೩ ॥

**ಸೀತೆ**—(ಮೆಲ್ಲಮೆಲ್ಲನೆ ಸಮಾಧಾನಹೊಂದಿ) ಪುಣ್ಯವಶದಿಂದ ನಾನು ಪುತ್ರರನ್ನು ಪಡೆದಿರುವೆನು. ಹಾ! ಆರ್ಯಪುತ್ರಾ!

**ಲಕ್ಷ್ಮಣ**—(ಸ್ವಾಮಿಯ ಪಾದಗಳಲ್ಲಿ ಬಿದ್ದು) ಸ್ವಾಮಿಯೆ, ಭಾಗ್ಯ ವಶದಿಂದ ರಘುವಂಶದಲ್ಲಿ ಶುಭಕರವಾದ ಸಂತಾನವು ಜನಿಸಿರುವುದರಿಂದ ನಾವು ಅಭಿವೃದ್ಧಿಹೊಂದುತ್ತಿದ್ದೇವೆ. (ಎಂದು ರಾಮನನ್ನು ನೋಡುತ್ತ) ಇದೇನು! ಸ್ವಾಮಿಯು ಬಾಷ್ಪಪ್ರವಾಹಗಳನ್ನು ಸುರಿಸುತ್ತಿದ್ದಂತೆಯೇ ಮೂರ್ಛಿತನಾದನಲ್ಲ! (ಎಂದು ಬೀಸಿ ಉಪಚರಿಸುವನು)

**ಪೃಥಿವೀಭಾಗೀರಥಿಯರು**—ಮಗಳೆ, ಸಮಾಧಾನತಂದುಕೊ! ಸಮಾಧಾನತಂದುಕೊ!

**ಸೀತೆ**—(ಮೆಲ್ಲಮೆಲ್ಲನೆ ಸಮಾಧಾನಹೊಂದಿ) ಪೂಜ್ಯೆಯರೇ ನೀವಾರು! ನನ್ನನ್ನು ಬಿಟ್ಟು ಬಿಡಿರಿ!

**ಪೃಥಿವಿ**—ಮಗಳೆ, ಈಕೆ ರಘುಕುಲದೇವತೆಯಾದ ಭಾಗೀ ರಥಿಯು.

**ಸೀತೆ**—ಪೂಜ್ಯಳೆ, ನಿನಗೆ ವಂದಿಸಿಕೊಳ್ಳುವೆನು.

**ಭಾಗೀರಥಿ**—ಮಗಳೆ, ನಡತೆಗೆ ತಕ್ಕ ಹಾಗಿರುವ ಶುಭಪರಂಪರೆ ಗಳನ್ನು ಪಡೆವವಳಾಗು!

**ಲಕ್ಷ್ಮಣ**—ನಾವು ಅನುಗೃಹೀತರಾದೆವು.

**ಭಾಗೀರಥಿ**—ಈಕೆ ನಿನ್ನ ಮಾತೆಯಾದ ವಿಶ್ವಂಭರೆಯು.

**ಸೀತೆ**—ತಾಯೆ, ಇಂತಹ ದುರ್ದಶೆಯಲ್ಲಿರುವ ನಾನು ನಿನ್ನ ದೃಷ್ಟಿಗೆ ತೋರಿಬಂದೆನೆ?

ಪೃಥಿವಿ—ಮಗಳೆ, ಬಾ! ಬಾ! (ಎಂದು ಸೀತೆಯನ್ನು ಆಲಿಂಗಿಸಿ ಕೊಂಡು ಮೂರ್ಛೆಹೊಂದುವಳು)

ಲಕ್ಷ್ಮಣ—(ಸಂತೋಷದೊಡನೆ) ಆಹಾ! ಆರ್ಯೆಯು ಇಂತಹ ಕಷ್ಟಕಾಲದಲ್ಲಿ ಪೂಜ್ಯೆಯರಾಗಿರುವ ಗಂಗಾಭೂದೇವಿಯರಿಂದ ಅನುಗೃಹೀತಳಾಗುತ್ತಿರುವಳೇ!

ರಾಮ—(ನೋಡಿ) ಇದು ಭಾಗ್ಯವಿಶೇಷದಿಂದಲೇ ಸರಿ. ಆದರೆ, ಈ ವ್ಯಸನವು ನನ್ನ ವ್ಯಸನದಂತಿರದೆ ಅದರಿಂದ ತೀರ ವಿಲಕ್ಷಣವುಳ್ಳದ್ದಾಗಿದೆ.

ಭಾಗೀರಥಿ—ಕ್ಷಮಾಗುಣವೇ ಪ್ರಧಾನವಾಗಿರುವುದರಿಂದ ವಿಶ್ವಂಭರೆಯೆಂಬ ಬಿರುದನ್ನು ಧರಿಸಿದ ಈ ಭೂದೇವಿಯೇ ವ್ಯಥೆಪಡುವಳೆಂದಮೇಲೆ ಅಪತ್ಯಸ್ನೇಹವೆಂಬುದು ಬಹುಪ್ರಬಲವಾದುದೆಂದು ಸಿದ್ಧವಾದಂತಾಯಿತು. ಅಥವಾ ಯಾರಿಗಾದರೇನು? ಮೋಹಾತ್ಮಕಗ್ರಂಥಿರೂಪವಾಗಿಯೂ, ಸುಖದುಃಖರೂಪವಾದ ಈ ಸಂಸಾರದಲ್ಲಿ ಮನಸ್ಸುಗಳನ್ನು ಪೋಣಿಸಲು ಸಾಧನವಾದ ನೂಲಿನಂತೆಯೂ, ಚೈತನ್ಯವುಳ್ಳ ಪ್ರಾಣಿಗಳಿಗೆ ಅಭ್ಯಂತರವಾದ ಒಂದು ಬಾಧೆಯನ್ನು ಉಂಟುಮಾಡುವುದಾಗಿಯೂ ಇರುವ ಅಪತ್ಯಸ್ನೇಹವೆಂಬುದು ಎಲ್ಲರಿಗೂ ಸಮಾನವಾಗಿದೆ. ಗೆಳತಿಯಾದ ಭೂದೇವಿ, ಸಮಾಧಾನತಂದುಕೊ! ವತ್ಸೆ! ಸೀತೇ, ಸಮಾಧಾನತಂದುಕೊ!

ಪೃಥಿವಿ—(ಸಮಾಧಾನಹೊಂದಿ) ದೇವಿ. ಸೀತೆಯನ್ನು ಪಡೆದ ನಾನು ಮನಸ್ಸಿಗೆ ಹೇಗೆ ತಾನೇ ಸಮಾಧಾನತಂದುಕೊಳ್ಳಲಿ?

— ಮತ್ತೇಭವಿಕ್ರೀಡಿತ —

ಸಹಿಸಿರ್ದೆಂ ಸುತೆಗಂದು ರಾಕ್ಷಸನ ಲಂಕಾವಾಸಮಾಗಿರ್ದೊಡಂ
ಸಹಿಸಲ್ಕಾರ್ಪೆನೆ ನಾಥನಿಂತು ತೊರೆಯಲ್ಕೀ ಬನ್ನಮಂ ನೋಡುತುಂ ।

ಭಾಗೀರಥಿ—

ಮಹನೀಯೇ! ವಿಧಿ ಕಷ್ಟಮಂ ಕೊಡುವೆನೆಂದಿರ್ಪಾಗ ತನ್ಮಾರ್ಗಮಂ
ಮಹಿಯೊಳ್ವಾರಿಪ ಶಕ್ತರಾರೊಳರೊ! ನೀನೇ ಚಿತ್ತದೊಳ್ಭಾವಿಸೌ! ॥ ೪ ॥

ಪೃಥಿವಿ—ಪೂಜ್ಯಳೇ ನೀನು ಹೇಳಿದುದು ನಿಜವು. ಅದರಿ, ಇದು ನಿಮ್ಮ ರಾಮಭದ್ರನಿಗೆ ಸರಿಯೆನಿಸಿರಬೇಕು—

ಕಂ॥ ತರಳಂಗೆ ಬಾಲ್ಯದೊಳ್ತಾಂ
ವರಿಸಿದ ಕರತಲಮೆ ಸಾಕ್ಷ್ಯಕಾಗದ ಬಳಿಯಂ ।
ಧರೆಯಾಂ ಜನಕಂ ವೈಶ್ವಾ
ನರರಪ್ಪೆವದೆಂತು? ವೃತ್ತಿಕುಲಗಳ್ದೂರಂ ॥ ೫ ॥

ಸೀತೆ—ಆಹಾ! ಆರ್ಯಪುತ್ರನೇ, ಸ್ಮರಿಸಿಕೊಳ್ಳುವುದಿಲ್ಲವೇ?

ಪೃಥಿವಿ—ಮಗಳೆ, ನಿನ್ನ ಆರ್ಯಪುತ್ರನಾವನು?

ಸೀತೆ—(ಲಜ್ಜಿತಳಾಗಿ ಕಂಬನಿಗರೆಯುತ್ತ) ಮಾತೆಯು ಹೇಳಿದಂತೆಯೆ!

ರಾಮ—ಜನನಿ ವಿಶ್ವಂಭರೆ, ನಿಜಕ್ಕೂ ನಾನು ಹಾಗೆಯೇ ಆಗಿರುವೆನು.

ಭಾಗೀರಥಿ—ಪೂಜ್ಯಳಾದ ಸರ್ವಂಸಹೇ, ನೀನು ಸಂಸಾರಕ್ಕೆ ಒಡಲಾಗಿರುವೆ; ಆದರೂ ತಿಳಿಯದವಳಂತೆ ಅಳಿಯನಲ್ಲಿ ಕೋಪಿಸಿಕೊಳ್ಳುವೆಯೇಕೆ?

— ಮತ್ತೇಭವಿಕ್ರೀಡಿತ —

ಭರದಿಂ ಲೋಕದೆ ಪರ್ಬಿತಿರ್ದುದಯಶಂ! ಸೀತಾಗ್ನಿಶುದ್ಧಿಕ್ರಮಂ
ಪಿರಿದುಂ ದೂರದ ಲಂಕೆಯಲ್ಲಿ ನಡೆಯಲ್ಕಾಣ್ಬಂದಮೆಂತೋ ಜನಂ ।
ಕರಮಿಕ್ಷ್ವಾಕುಗಳೆಲ್ಲರುಂ ಪ್ರಜೆಗಳಂ ರಂಜಿಪ್ಪ ಯತ್ನಕ್ಕೆ ನೋಂ—
ತಿರಲಾ ವತ್ಸನದೆಂತು ಕಾರ್ಯಭರಮಂ ನಿರ್ವರ್ತಿಕುಂ ಪೇಳ ನೀಂ ॥ ೬ ॥

ಲಕ್ಷ್ಮಣ—ದೇವತೆಗಳು ತತ್ತ್ವಾರ್ಥವನ್ನು ತಿಳಿಯುವುದರಲ್ಲಿ ತಡೆಯಿಲ್ಲದ ಮನಃಪ್ರವೃತ್ತಿಯುಳ್ಳವರು.

ಭಾಗೀರಥಿ—ಆದರೂ ದೇವಿಯೇ! ಕೈಮುಗಿಯುವೆನು; ಪ್ರಸನ್ನಳಾಗು!

ರಾಮ—ತಾಯಿ, ಭಗೀರಥನಲ್ಲಿ ನೀನು ತೋರಿದ ಅನುಗ್ರಹವು ಅವನ ಕುಲದಲ್ಲಿಯೂ ಅನುವರ್ತಿಸಿದಂತಾಯಿತು.

ಪೃಥಿವಿ—ಪೂಜ್ಯಳೆ, ನಾನು ನಿನ್ನಲ್ಲಿ ನಿರಂತರವೂ ಪ್ರಸನ್ನಳಾಗಿರುವೆನು. ಆದರೇನು; ಮಕ್ಕಳಲ್ಲಿರುವ ಸ್ನೇಹದ ಭರವು ಸಂಕಷ್ಟಶ್ರವಣಾವಸರದಲ್ಲಿ ಅತಿದುಸ್ಸಹವಾಗುವುದು. ರಾಮಚಂದ್ರನಿಗೆ ಸೀತೆಯ ವಿಷಯದಲ್ಲಿ ಇರತಕ್ಕ ಸ್ನೇಹವನ್ನು ನಾನೇನೂ ಅರಿಯದವಳಲ್ಲ—

ಕಂ॥ ಬಿದಿಯಾಟಕೆ ರಾಮಂ ಚಿ-
ತ್ರದೆ ಕುದಿಕುದಿಯುತ್ತೆ ಮಡದಿಯಂ ತೊರೆಯುತ್ತಿಂ ।
ದೆರ್ದೆಗಾರಿಕೆಯಿಂ ಪ್ರಜೆಗ
ಳ್ಗೊದವಿಪರ್ಾ ಪುಣ್ಯಫಲದೆಯುಂ ಬರ್ದುಕಿದಪಂ ॥ ೭ ॥

ರಾಮ—ಗುರುಜನರು ಮಕ್ಕಳಲ್ಲಿ ಕರುಣೆಯುಳ್ಳವರಲ್ಲವೆ?

ಸೀತೆ—(ರೋದಿಸುತ್ತ ಕೈಜೋಡಿಸಿಕೊಂಡು) ತಾಯೆ ಭೂದೇವಿ, ನನ್ನನ್ನೀಗ ನಿನ್ನ ಅಂಗಗಳಲ್ಲಿ ಲಯಹೊಂದಿಸಿಕೊ!

ರಾಮ—ಬೇರೆ ಇನ್ನೇನು ಹೇಳುವಳು!

ಭಾಗೀರಥಿ—ಮಗಳೆ, ನೀನೇನು ಹೇಳುತ್ತಿರುವೆ? ಲಯವಿಲ್ಲದೇನೇ ನೀನು ಸಾವಿರಾರು ಸಂವತ್ಸರಗಳ ವರೆಗೂ ಬಾಳಿರು!

ಪೃಥಿವಿ—ಮಗಳೆ, ನೀನು ಮಕ್ಕಳನ್ನು ಲಾಲಿಸಿ ಪಾಲಿಸಬೇಕು.

ಸೀತೆ—ಅನಾಥರಾದ ಮಕ್ಕಳಿಂದ ಫಲವೇನು?

ರಾಮ—ಹೃದಯವೆ, ನೀನು ವಜ್ರದಂತೆ ಕಠಿನವಾಗಿರುವೆ.

ಭಾಗೀರಥಿ—ವತ್ಸೆ, ಸನಾಥರಾದ ಮಕ್ಕಳನ್ನು ಅನಾಥರೆನ್ನುವೆಯೊ?

ಸೀತೆ—ನಿರ್ಭಾಗ್ಯಳಾದ ನನಗೆ ಗತಿಯೇನು?

ಭಾಗೀರಥೀಪೃಥಿವಿಯರು—

ಕಂ॥ ನುಡಿಯದಿರೀ ಪರಿ ಮಗಳೇ
ಪೊಡವಿಗೆ ಮಂಗಳಮೆನಿಪ್ಪ ತನ್ನಂ ಪಳಿವಾ? ।
ಪಡೆದೀ ಪರಿಶುದ್ಧತೆ ನೂ-
ರ್ಮಡಿಯಪ್ಪುದು ನಿನ್ನ ಸಂಗದಿಂದೆಮಗಲ್ತೇ ॥ ೮ ॥

ಲಕ್ಷ್ಮಣ—ಆರ್ಯನು ಕೇಳಬೇಕು.

ರಾಮ—ಲೋಕವು ಕೇಳಲಿ!

(ನೇಪಥ್ಯದಲ್ಲಿ ಕಲಕಲವಾಗುವುದು)

ರಾಮ—ಇದೇನೋ ಆಶ್ಚರ್ಯಕರವು!

ಸೀತೆ—ಇದೇನು? ಕೋಲಾಹಲಧ್ವನಿಯೊಡನೆ ಆಕಾಶವು ಪ್ರಜ್ವಲಿಸುತ್ತಿದೆಯಲ್ಲಾ!

ಭಾಗೀರಥೀಪೃಥಿವಿಯರು—ತಿಳಿಯಿತು—

ಕಂ॥ ವರಮುನಿಭೃಶಾಶ್ವನಿಂದಂ
ಬರೆ ಕುಶಿಕಸುತಂಗೆ ಮತ್ತೆ ರಾಮಂಗವನಿಂ।
ಗುರುಗಳ ಬಳಿಯಿಂತಿರ್ದಾ
ಶರನಿಕರಂ ಜೃಂಭಕಂಗಳೊಡನುದ್ಭವಿಕುಂ ॥ ೯ ॥

(ಪುನಃ ನೇಪಥ್ಯದಲ್ಲಿ)

ಕಂ॥ ಇನಿಯಂ ನಿನಗಾಲೇಖ್ಯಮ
ನನುವಿಂ ತೋರ್ಪಂತೆಯೆಮ್ಮನಿತ್ತುದರಿಂದಂ।
ಜನಕಜೆ ನಮಿಪೆವು ನಿನ್ನಯ
ತನುಜಾತರನೊಂದಿ ಬೆಳೆಗುತಿರ್ಪೆವು ಸತತಂ ॥ ೧೦ ॥

ಸೀತೆ—ಆಹಾ! ಭಾಗ್ಯವಶದಿಂದ ಅಸ್ತ್ರದೇವತೆಗಳೆಲ್ಲರೂ ಪ್ರತ್ಯಕ್ಷರಾದರು. ಆರ್ಯಪುತ್ರನೆ, ನಿನ್ನ ಅನುಗ್ರಹಗಳು ಈಗಲೂ ಫಲಿಸುತ್ತಿವೆಯಲ್ಲಾ!

ಲಕ್ಷ್ಮಣ—ಆರ್ಯನೆ, ನೀನಂದು ಚಿತ್ರದರ್ಶನಾವಸರದಲ್ಲಿ ದೇವಿಯನ್ನು ಕುರಿತು—"ಪ್ರಿಯೇ ಈ ಅಸ್ತ್ರದೇವತೆಗಳು ನಿನ್ನ ಗರ್ಭದಲ್ಲಿರುವ ಪುತ್ರರನ್ನು ಆಶ್ರಯಿಸುವುವು" ಎಂದು ಹೇಳಿದೆಯಲ್ಲವೆ?

ಭಾಗೀರಥೀಪೃಥಿವಿಯರು—

ಕಂ॥ ಪರಮಾಸ್ತ್ರಂಗಳೆ ನಮಿಪೆವು
ತರಳರನೀ ತೆರದೆ ಬಂದು ಸೇರ್ದುದರಿಂದಂ।

ಸ್ಮರಿಸಿದ ಕಾಲಕೆ ಬಾಲರ
ಕರಮಂ ನೀಂ ಪೊರ್ದಿರಕ್ಕೆ ಪುತ್ರರ್ಗೆ ಶುಭಂ ॥ ೧೧ ॥

ವಿಯೋಗಿನಿ॥ ಕರುಣಾಬ್ಧಿತರಂಗಮಾಲೆಯಂ
ಬೆರೆಯುತ್ತದ್ಭುತಸಂಮುದಂಗಳೇಂ? ।
ಭರದಿಂ ದಶೆಯಂ ವಿವರ್ತಿಪಂ
ತಿರಲೆನ್ನ ಸ್ಥಿತಿಯೋ ವಿನೂತನಂ ॥ ೧೨ ॥

ಭಾಗೀರಥೀಪೃಥಿವಿಯರು— ಮಗಳೆ, ಸಂತೋಷಪಡುವವ ಳಾಗು! ಸಂತೋಷಪಡುವವಳಾಗು! ಈಗ ನಿನ್ನ ಪುತ್ರರಿಬ್ಬರೂ ರಾಮ ಚಂದ್ರನಿಗೆ ಸಮಾನರಾದರು.

ಸೀತೆ—ತಾಯಂದಿರೆ, ಈ ಬಾಲಕರಿಗೆ ಕ್ಷತ್ರಿಯೋಚಿತಗಳಾದ ಸಂಸ್ಕಾರಗಳನ್ನು ಮಾಡಿಸುವವರಾರು?

ರಾಮ—

ಕಂ॥ ಇನಕುಲಕಾನಂದಿಸಿಯಾ
ಜನಕಜೆಯುಂ ಕಾಲದಲ್ಲಿ ವೈದಿಕವಿಧಿಯಂ ।
ತನುಜರ್ಗೊಡರಿಪರಾರೆಂ
ದೆನಲಾಯ್ತೇ! ಮುನಿವಸಿಷ್ಠನೇ ಗುರುವಿರಲುಂ ॥ ೧೩ ॥

ಭಾಗೀರಥಿ—ಮಗಳೆ, ನೀನು ಆ ವಿಷಯದಲ್ಲಿ ಚಿಂತಿಸಬೇಕಾ ಗಿಲ್ಲ; ಸ್ತನ್ಯಪಾನವನ್ನು ತೊರೆದ ಬಳಿಕ ಪುತ್ರರನ್ನು ವಾಲ್ಮೀಕಿಮುನಿಗೆ ಸಮರ್ಪಿಸುವೆನು. ಆತನಾದರೂ—

ಕಂ॥ ವರಮುನಿವಸಿಷ್ಠನಂದದೆ
ನೆರವೇರಿಸಿದಂ ಕ್ರಿಯಾಕಲಾಪಂಗಳನೀ ।
ವರೆಗಂ ರಘುಜರ್ಗೆನಲೀ
ತರಳರ್ಗಂ ಮಾಳ್ಪನೈಸೆ ಸಂಸ್ಕಾರಗಳಂ ॥ ೧೪ ॥

ಆದರೂ—

— ದ್ರುತವಿಲಂಬಿತ —

ಇನಕುಲಕ್ಕೆ ವಸಿಷ್ಠನ ರೀತಿಯಿಂ
ಜನಕವಂಶಪುರೋಹಿತನಾಂಗಿರಂ ।

ನೆನೆಯುಲಂತೆಯೆ ಪುತ್ರಿನ ಪುತ್ರನುಂ
ಘನಪುರೋಧಸನನ್ವಯುಯುಗ್ಮಕಂ ॥ ೧೫ ॥

ರಾಮ—ಗಂಗಾಮಾತೆಯು ಬಹುದೀರ್ಘವಾಗಿ ವಿಚಾರಮಾಡಿ ಕುವಳು.

ಲಕ್ಷ್ಮಣ—ಆರ್ಯನೆ, ಹೇಗೆ ಹೇಗೆ ಭಾವಿಸಿದರೂ ಇಲ್ಲಿರುವ ಶಿಶುಗಳೇ ಕುಶಲವರಾಗಿರಬೇಕೆಂದು ನನಗನಿಸುತ್ತಿದೆ. ಯಾಕೆಂದರೆ—

— ಮತ್ತೇಭವಿಕ್ರೀಡಿತ —

ಇವರಂ ಸಾರ್ದುದು ಜೃಂಭಕಾಸ್ತ್ರನಿವಹಂ ವಾಲ್ಮೀಕಿಶಿಷ್ಯರ್ಬಳಿ—
ಕ್ಕಿವರಾರ್ಯಂ ಪ್ರತಿಬಿಂಬಿಸಿರ್ಪತೆರದಿಂ ರಾಜಿಪ್ಪರೀ ವೀರರಿಂ—।
ತಿವರೊಳ್ತೋರ್ದಪ ವಿಕ್ರಮಕ್ಕೆ ಜಗಮೇ ತಾಂ ಬೆಕ್ಕಸಂಬಟ್ಟುದು—
ದ್ಭವದಿಂ ಪನ್ನೆರಡಬ್ದದಲ್ಲಿ ಮೆರೆದಪ್ಪಬ್ಬಾಲರಿಂದಿರ್ವರುಂ ॥ ೧೬ ॥

ರಾಮ—ಹಾಗೆಯೇ ಭಾವಿಸುತ್ತಿರುವ ನನ್ನ ಹೃದಯವಾದರೂ ಅತಿಯಾಗಿ ಮುಗ್ಧವಾಗುತ್ತಿರುವುದು.

ಪೃಥಿವಿ—ಮಗಳೆ, ನನ್ನೊಂದಿಗೆ ಬಾ; ಪಾತಾಳಲೋಕವನ್ನು ಪರಿಶುದ್ಧಿಗೊಳಿಸುವೆಯಂತೆ!

ರಾಮ—ಹಾ! ಪ್ರೇಯಸಿ, ಲೋಕಾಂತರವನ್ನೈಯ್ದಿದೆಯಾ?

ಸೀತೆ—ಜನನಿ, ನಿನ್ನ ಅಂಗಗಳಲ್ಲಿ ನನ್ನನ್ನು ಲಯಹೊಂದಿಸುವವಳಾಗು; ನಾನು ಲೋಕದ ಅವಮಾನವನ್ನು ಸರ್ವಥಾ ಸಹಿಸಲಾರೆನು.

ಲಕ್ಷ್ಮಣ—ಇದಕ್ಕೆ ಎಂತಹ ಉತ್ತರವಿರಬಹುದೊ?

ಪೃಥಿವಿ—ಮಗಳೆ, ನೀನು ನನ್ನ ಮಾತಿನ ಮೇರೆಗೆ ಶಿಶುಗಳು ಸ್ತನ್ಯಪಾನವನ್ನು ಬಿಡುವ ತನಕ ಕಾಲವನ್ನು ನಿರೀಕ್ಷಿಸುತ್ತಿರಬೇಕು. ಬಳಿಕ ನಿನ್ನ ಬುದ್ಧಿಗೆ ಹೇಗೆ ತೋರುವುದೋ ಹಾಗೆಯೇ ಮಾಡುವೆನು.

ಭಾಗೀರಥಿ—ಭೂದೇವಿಯು ಹೇಳಿದಂತೆಯೇ ಸರಿ.

(ಹೀಗೆ ನಿಶ್ವಸಿಸಿಕೊಂಡು ಗಂಗಾಭೂದೇವಿಯರು ಸೀತೆಯೊಂದಿಗೆ ಹೊರಟುಹೋಗು ವರು)

**ರಾಮ**—ಇದೇನು! ವೈದೇಹಿಗೆ ವಿಲಯವುಂಟಾಯಿತೆ? ಹಾ! ದಂಡಕಾರಣ್ಯವಾಸಪ್ರಿಯಸಖಿ ದೇವಿ! ಪರಿಪೂತಚರಿತ್ರೆಯುಳ್ಳ ಸೀತೇ ನೀನು ಲೋಕಾಂತರವನ್ನು ಹೊಂದಿದವಳಾದೆಯಾ? (ಎಂದು ಹೇಳುತ್ತ ಮೂರ್ಛೆಹೊಂದುವನು).

**ಲಕ್ಷ್ಮಣ**—ಭಗವಂತನಾದ ವಾಲ್ಮೀಕಿಮುನಿಯೆ, ಕಾಪಾಡು! ಕಾಪಾಡು! ನಿನ್ನ ಕಾವ್ಯದ ಪರಿಣಾಮವು ಹೀಗಾಯಿತಲ್ಲಾ!

(ನೇಪಥ್ಯದಲ್ಲಿ)

ವಾದ್ಯಘೋಷಾದಿಗಳು ನಿಲ್ಲಿಸೋಣಾಗಲಿ! ದೇವತೆಗಳು ಮನುಜರು ಸ್ಥಾವರಜಂಗಮಾತ್ಮಕಜೀವಜಾಲಗಳು ಎಂಬ ಭೇದವಿಲ್ಲದೆ ಸಭಾ ಸದರೆಲ್ಲರೂ ವಾಲ್ಮೀಕಿಮಹಾಮುನಿಗಳು ತನ್ನ ಕೃತಿಯಲ್ಲಿ ಪ್ರದರ್ಶಿಸುವು ದಾಗಿ ತಿಳಿಸಿದ ಅದ್ಭುತಕರವಾದ ದೃಶ್ಯವನ್ನು ನೋಡಬೇಕು—

**ಲಕ್ಷ್ಮಣ**—(ನೋಡಿ)—

— ಮತ್ತೇಭವಿಕ್ರೀಡಿತ —

ಇದೊ ಗಂಗಾಜಲವಿಗಾಮಂಥನದಿನೇಂ ಕ್ಷೋಭಂಗೊಳುತ್ತಿರ್ಪುದೋ
ಪದಪಿಂದಂಬರಮಿಂತು ತುಂಬುಗುಮಿದೇಂ ದೇವರ್ಷಿಸಂಘಂಗಳಿಂ ।
ಮುದಮಾಂತಿರ್ಪ ಸುರಾಪಗಾಕ್ಷಿತಿಯರಿಂ ಸೇದಾರ್ಯೆಯಿಂದಂಬುವಿಂ
ದುದಿಸುತ್ತಿರ್ದಪಳಿಲ್ಲಿ ನೋಡಲೆನಗತ್ಯಾಶ್ಚರ್ಯಮಾದಪ್ಪುದಯ್ ॥೧೭॥

(ನೇಪಥ್ಯದಲ್ಲಿ)

**ಕಂ॥** ಲೋಕಸ್ತುತ್ಯೆಯರುಂಧತಿ
ನಾಕನದೀಪೃಥ್ವಿಯರ್ಕಳೆಂದರಿಯೆಮ್ಮಂ ।
ಈಕೆಯ ನಿನಗೆ ಸಮರ್ಪಿಪೆ
ವೀಕೆಯೆ ಕಲ್ಯಾಣಿ ನಿನ್ನ ನಸ್ನಿಯ ವಧುವಾ ॥ ೧೮ ॥

**ಲಕ್ಷ್ಮಣ**—ಅತ್ಯಾಶ್ಚರ್ಯವೇಸರಿ! ಆರ್ಯೆ ನೋಡು! ನೋಡು! ಸ್ವಾಮಿಗೆ ಇನ್ನೂ ಪ್ರಜ್ಞೆಯುಂಟಾಗಿಲ್ಲವಲ್ಲಾ!

(ಬಳಿಕ ಅರುಂಧತಿಯೂ ಸೀತೆಯೂ ಪ್ರವೇಶಿಸುವರು)

ಅರುಂಧತಿ—

ಕಂ॥ ಬಿಡು ಲಜ್ಜೆಯನೆಲೆಮಗಳೇ
ತಡೆಯದೆ ಮುಂದೆಯ್ದಿ ನೋಡು ಮೈಮರೆದಿರ್ಪಾ।
ಪೊಡವಿಪನಂ ತಡವುತ್ತುಂ
ಪಿಡಿದೆಬ್ಬಿಸು ಮೃದುಲವಾದ ಕರಪಲ್ಲವದಿಂ ॥ ೧೯ ॥

ಸೀತೆ—(ಸಂಭ್ರಮದೊಡನೆ ಸ್ಪರ್ಶಿಸುತ್ತ) ಆರ್ಯಪುತ್ರನು ಸಮಾಧಾನ ಹೊಂದಬೇಕು! ಸಮಾಧಾನಹೊಂದಬೇಕು!

ರಾಮ—(ಮೂರ್ಛೆತಿಳಿದು ಆನಂದಭರಿತನಾಗಿ) ಆಹಾ! ಇದೇನು! (ಸಂತೋಷಾಶ್ಚರ್ಯಗಳೊಡನೆ ನೋಡಿ) ಎನ್ನ ಹೃನ್ಮಂದಿರದೊಡತಿಯಾದ ಸೀತೆಯು! (ಲಜ್ಜೆಯಿಂದ) ಆಹಾ! ಜನನಿಯಾದ ಅರುಂಧತಿಯು! ಋಷ್ಯ ಶೃಂಗಮುನಿಯೇ ಮೊದಲಾದ ನಮ್ಮ ಗುರುಜನರೆಲ್ಲರೂ ಚಿತ್ತೈಸಿರುವರು.

ಅರುಂಧತಿ—ವತ್ಸ ರಾಮಚಂದ್ರ, ನಿಮ್ಮ ಕುಲದೇವತೆಯಾದ ಗಂಗಾಮಾತೆಯು ಸುಪ್ರಸನ್ನಳಾಗಿರುವುದನ್ನು ನೋಡಿದೆಯಾ?

(ನೇಪಥ್ಯದಲ್ಲಿ)

ಜಗದೊಡೆಯನಾದ ರಾಮಭದ್ರನೇ, ನೀನಂದು ಅಂತಃಪುರದಲ್ಲಿ ಚಿತ್ರ ವನ್ನು ನೋಡುತ್ತಿದ್ದಾಗ ನನ್ನನ್ನು ಕುರಿತು—"ತಾಯೆ" ಗರ್ಭಿಣಿಯಾಗಿ ರುವ ನಿನ್ನ ಸೊಸೆಯಾದ ಸೀತೆಯಲ್ಲಿ ಅರುಂಧತೀದೇವಿಯಂತೆ ಕ್ಷೇಮ ವನ್ನು ಚಿಂತಿಸುತ್ತಿರಬೇಕು" ಎಂದು ಬಿನ್ನೈಸಿರುವುದನ್ನು ಸ್ಮರಿಸಿಕೊಳ್ಳುವೆ ಯೇನು? ಆ ನಿನ್ನ ಮಾತನ್ನು ಬಿಡದೆ ಪರಿಪಾಲಿಸಿದ ನಾನಿಂದು ಋಣ ಮುಕ್ತಳಾದೆನು.

ಅರುಂಧತಿ—ವತ್ಸ ರಾಮಚಂದ್ರ, ಇವಳೇ ನಿನ್ನ ಅತ್ತೆಯಾದ ಭೂದೇವಿಯು.

(ನೇಪಥ್ಯದಲ್ಲಿ)

ಆಯುಷ್ಮಂತನಾದ ರಾಮಚಂದ್ರನೇ, ನೀನು ಲೋಕಾಪವಾದನಿಮಿತ್ತ ದಿಂದ ನನ್ನ ಪುತ್ರಿಯಾದ ಸೀತೆಯನ್ನು ಪರಿತ್ಯಾಗಮಾಡುತ್ತಿದ್ದ ವೇಳೆಗೆ ನನ್ನನ್ನು ಕುರಿತು—"ಪೂಜ್ಯಳಾದ ವಸುಂಧರಾದೇವಿಯೇ, ಶ್ಲಾಘ್ಯವಾದ

ಚರಿತ್ರೆಯುಳ್ಳ ನಿನ್ನ ಸುತೆಯಾದ ಜಾನಕಿಯನ್ನು ಸಲಹುವವಳಾಗು"
ಎಂದು ಹೇಳಿದೆಯಲ್ಲಾ! ಪ್ರಭುವಾದ ನಿನ್ನ ಮಾತನ್ನು ಬಿಡದೆ ಪರಿ
ಪಾಲಿಸಿದ ನಾನಿಂದು ಅದರಿಂದ ಬಿಡುಗಡೆ ಹೊಂದುತ್ತಿರುವೆನು.

**ರಾಮ**—ಭಗವತಿ ವಸುಂಧರೇ, ಅಪರಾಧಿಯಾಗಿರುವ ರಾಮನನ್ನು
ಪುತ್ರಭಾವದಿಂದ ಅನುಗ್ರಹಿಸಬೇಕೆಂದು ಎರಗಿಕೊಳ್ಳುವೆನು.

**ಅರುಂಧತಿ**—ಪುರಪ್ರಮುಖರು ದೇಶದ ಪ್ರಜೆಗಳು ಎಂಬ ಭೇದ
ವಿಲ್ಲದೆ ಸರ್ವರೂ ಕೇಳಿಕೊಳ್ಳಬೇಕು—"ಗಂಗಾಭೂದೇವಿಯರಿಂದ
ಸಂಕೀರ್ತಿತಳೂ, ಅರುಂಧತಿಯಾದ ನನ್ನಿಂದ ಸಮರ್ಪಿತಳೂ, ಅಗ್ನಿ
ನಾರಾಯಣನಿಂದ ಪುಣ್ಯಚರಿತ್ರಳೆಂದು ನಿರ್ಣೀತಳೂ, ಬ್ರಹ್ಮನೇ ಮೊದ
ಲಾದ ದೇವತೆಗಳಿಂದ ಅಭಿಸ್ತುತಳೂ ಎನಿಸಿ ಸೂರ್ಯಕುಲಕ್ಕೆ ಸೊಸೆ
ಯಾಗಿರುವ ಯಜ್ಞವೇದೀಸಂಭವೆಯೂ ಜನಕರಾಯನ ಪುತ್ರಿಯೂ
ಆಗಿರುವ ಈ ಸೀತೆಯನ್ನು ನೀವೀಗ ಮಹಾರಾಣಿಯೆಂದು ಪರಿಗ್ರಹಿಸಿ
ಕೊಳ್ಳಬೇಕು" ಎಂಬ ಈ ವಿಷಯದಲ್ಲಿ ನಿಮ್ಮೆಲ್ಲರ ಯೋಚನೆಯೇನು?

**ಲಕ್ಷ್ಮಣ**—ಆರ್ಯನೆ, ನೋಡಿದೆಯಾ! ಅರುಂಧತೀದೇವಿಯಿಂದ
ತಿರಸ್ಕೃತರಾದ ಪುರಪ್ರಮುಖರೂ ದೇಶದ ಪ್ರಜೆಗಳೂ ಮಾತ್ರವಲ್ಲದೆ,
ಸ್ಥಾವರಜಂಗಮಾತ್ಮಕವಾದ ಸಮಸ್ತಜೀವಜಾಲಗಳೂ ಆರ್ಯೆ
ಯನ್ನು ನಮಸ್ಕರಿಸುತ್ತ ಸಂಭಾವಿಸುತ್ತಿರುವರಲ್ಲಾ! ಅಷ್ಟದಿಕ್ಪಾಲಕರೂ
ಸಪ್ತರ್ಷಿಗಳೂ ಕೂಡ ಗೌರವದೊಡನೆ ಪುಷ್ಪವೃಷ್ಟಿಯನ್ನು ಕರೆಯುತ್ತ
ತಮ್ಮ ಮೆಚ್ಚುಗೆಯನ್ನು ಪ್ರಕಟಿಸುತ್ತಿರುವರು.

**ಅರುಂಧತಿ**—

**ಕಂ॥** ಅರಸನೆ ಧರ್ಮದ ಮತದಿಂ
ದಿರಿಸಿದ ವರಶಾತಕುಂಭಪ್ರತಿಕೃತಿಯಿಪರ್ಾ ।
ವರಯಜ್ಞವನಾಚರಿಸಲ್
ವರಿಸೈ ಪುಣ್ಯಸ್ವರೂಪೆಯಾದೀ ಸತಿಯಂ ॥೨೦॥

**ಸೀತೆ**—(ಸ್ವಗತಂ) ಆರ್ಯಪುತ್ರನು ಸೀತೆಯ ದುಃಖವನ್ನು ಪರಿ
ಹರಿಸುವನೆ?

**ರಾಮ**—ಪೂಜ್ಯೆಯರ ಆದೇಶದಂತಾಗಲಿ!

**ಲಕ್ಷ್ಮಣ**— ನಾನೀಗ ಕೃತಾರ್ಥನಾದೆನು.

**ಸೀತೆ**— ನಾನೀಗ ಬದುಕಿದೆನು.

**ಲಕ್ಷ್ಮಣ**— ಆರ್ಯೆ, ಲಕ್ಷ್ಮಣನು ಅಭಿವಂದಿಸಿಕೊಳ್ಳುವನು (ಎಂದು ನಮಸ್ಕರಿಸುವನು).

**ಸೀತೆ**— ವತ್ಸ! ನೀನು ಹಿರಿಯರ ಆಜ್ಞೆಯನ್ನು ಪರಿಪಾಲಿಸುತ್ತ ಚಿರಂಜೀವಿಯಾಗು!

**ಅರುಂಧತಿ**— ಪೂಜ್ಯನಾದ ವಾಲ್ಮೀಕಿಯೆ, ಸೀತಾಗರ್ಭಸಂಭೂತರಾದ ಕುಶಲವರನ್ನೀಗ ರಾಮಚಂದ್ರನಿಗೆ ಸಮರ್ಪಿಸುವವನಾಗು! (ಎಂದು ಹೊರಟು ಹೋಗುವಳು).

**ರಾಮಲಕ್ಷ್ಮಣರು**— ವಿಧಿವಶದಿಂದ ನಮ್ಮ ಊಹೆಯಂತೆಯೇ ಆಯಿತು.

**ಸೀತೆ**— ಆ ಬಾಲಕರು ಎಲ್ಲಿರುವರೊ?

(ಬಳಿಕ ವಾಲ್ಮೀಕಿಯು ಕುಶಲವರೊಂದಿಗೆ ಪ್ರವೇಶಿಸುವನು)

**ವಾಲ್ಮೀಕಿ**— ಚಿರಂಜೀವಿಗಳಾದ ಕುಶಲವರೇ, ಈ ರಘುವಂಶಲಲಾಮನಾದ ರಾಮಚಂದ್ರನೇ ನಿಮ್ಮ ತಂದೆಯು; ಈ ಲಕ್ಷ್ಮಣನು ಚಿಕ್ಕ ತಂದೆಯು; ಈ ವಧುವಾದ ಸೀತೆಯೇ ಜನನಿಯು; ರಾಜರ್ಷಿಯೆಂದು ಪ್ರಸಿದ್ಧನಾದ ಈ ಜನಕರಾಯನೇ ಮಾತಾಮಹನು.

**ಸೀತೆ**— ಆಹಾ! ತಂದೆಯೇನು? ಮಕ್ಕಳೇನು?

**ಕುಶಲವರು**— ಆಹಾ ತಂದೆಯೇ! ಆಹಾ ತಾಯೇ! ಆಹಾ ಮಾತಾಮಹನೇ!

(ಎಂದೆಲ್ಲರಿಗೂ ನಮಸ್ಕರಿಸುವರು)

**ರಾಮಲಕ್ಷ್ಮಣರು**— (ಸಂತೋಷದಿಂದ ಪುತ್ರರನ್ನು ಆಲಿಂಗಿಸಿಕೊಂಡು) ನೀವೀಗಲಾದರೂ ದೊರೆತಿರಲ್ಲಾ!

**ಸೀತೆ**— ಮಕ್ಕಳೇ, ಇತ್ತಿತ್ತ ನನ್ನ ಸಮೀಪಕ್ಕೂ ಬನ್ನಿರಿ. ಬಹುಕಾಲದ ಮೇಲೆ ಲೋಕಾಂತರದಿಂದ ಬಂದಿರುವ ತಾಯಾದ ನನ್ನನ್ನು ನೀವೀಗಲೇ ಆಲಿಂಗಿಸಿಕೊಳ್ಳಿರಿ!

**ಕುಶಲವರು**— (ಹಾಗೆಯೇ ಮಾಡಿ) ನಾವು ಧನ್ಯರೇ ಸರಿ.

**ಸೀತೆ**—(ವಾಲ್ಮೀಕಿಯನ್ನು ಉದ್ದೇಶಿಸಿ) ಲೋಕಪೂಜ್ಯರೆ, ಸೀತೆಯಾದ ನಾನು ಅಭಿವಂದಿಸಿಕೊಳ್ಳುವೆನು. (ಎಂದು ಹಾಗೆಯೇ ಮಾಡುವಳು).

**ವಾಲ್ಮೀಕಿ**—ಮಗಳೆ, ಇದೇ ರೀತಿ ಪತಿಪುತ್ರರಿಂದೊಡಗೂಡಿ ಸಾಮ್ರಾಜ್ಯಸುಖದೊಡನೆ ದೀರ್ಘಾಯುಷ್ಮತಿಯಾಗಿ ಬಾಳು! (ಎಂದು ಆಶೀರ್ವದಿಸುವನು).

(ನೇಪಥ್ಯದಲ್ಲಿ)

ಸ್ವಾಮಿಯ ಆಜ್ಞೆಯ ಮೇರೆಗೆ ನಡೆಕೊಳ್ಳುತ್ತಿರುವ ಶತ್ರುಘ್ನನು ಲವಣಾಸುರನನ್ನು ಸಂಹರಿಸಿ ಮಧುರಾಪುರಾಧಿಪನಾಗಿ ಬಂದಿರುವನು.

**ಲಕ್ಷ್ಮಣ**—ಮೇಲಿಂದ ಮೇಲೆ ಶುಭಪರಂಪರೆಗಳು.

**ರಾಮ**—ಕಲ್ಯಾಣಪರಂಪರೆಯೇ ಸಂಭವಿಸಿದರೂ ನಾನದನ್ನು ನಂಬುವುದಿಲ್ಲ; ಅಥವಾ ನಾನೇಕೆ ಹೀಗೆ ಹೇಳಬೇಕು? ಮೇಲಿಂದ ಮೇಲೆ ಬಂದೊದಗುವುದೇ ಸಂಪತ್ತಿನ ಪದ್ಧತಿಯು.

**ವಾಲ್ಮೀಕಿ**—ರಾಮಭದ್ರನೇ, ನಾನಿನ್ನು ಮುಂದೆ ನಿನಗೆ ಯಾವ ಪ್ರಿಯವನ್ನು ಸಂಪಾದಿಸಲಿ? ಹೇಳು.

**ರಾಮ**—ಪೂಜ್ಯರೆ, ಇದಕ್ಕಿಂತ ಹೆಚ್ಚಿನ ಪ್ರಿಯವುಂಟೆ? ಆದರೂ ಈ ಭರತವಾಕ್ಯವು ನೆರವೇರಲಿ!

(ಭರತವಾಕ್ಯಂ)

— ಉತ್ಪಲಮಾಲೆ —

ಲೋಕದ ಪಾಪಮಂ ತೊಳೆದು ಪುಣ್ಯಮನೊಂದಿಪ ಮಾತೆಯಂತೆ ಮಾ
ಲೋಕದ ಗಂಗೆಯಂತೆ ಭವಭೂತಿಸರಸ್ವತಿ ಕಾವ್ಯರೂಪದಿಂ ।
ಶೋಕರಸಂ ವಲಂ ಜಗದೊಳೆನ್ನುತೆ ಭವ್ಯಮನೋಜ್ಞೆಯಾದುದಿಂ
ತಾ ಕವಿಪೇಳ್ದ ನಾಟ್ಯಕೃತಿಯಂ ಪರಿಭಾವಿಕೆ ಬಲ್ಲರಾವಗಂ ॥ ೭೧ ॥

(ಎಂದೆಲ್ಲರೂ ಹೊರಟು ಹೋಗುವರು)

ಇಂತಿದು ಸಮ್ಮೇಳನವೆಂಬ

ಸಪ್ತಮಾಂಕಂ

---

ಮಂಗಳಮಹಾಶ್ರೀ

## — ಈ ನಾಟಕದಲ್ಲಿರುವ ನುಡಿಮುತ್ತುಗಳು —

**ಪುಟ ಸಂಖ್ಯೆ ೧೨೮**

ಅಪತ್ಯಸ್ನೇಹವೆಂಬುದು ಬಹುಪ್ರಬಲವಾದುದು!

೩೪

ಅಭಿಭವಮಾದೊಡಂ ಸುಜನಸಂಗಮೆ ನೀಗಿಸುಗುಂ ಭವಾಬ್ಧಿಯಂ!

೧೧೧

ಅರಿಯದ ರೀತಿಯಿಂದೊಳಗಡಂಗಿದ ಹೇತುವೆವಸ್ತುಜಾತಮಂ
ಬೆರೆಯಿಕುಮಂತೆ ನೇಹಮುದು ನೋಡದು ಬಾಹ್ಯದ ಕಾರಣಂಗಳಂ ।
ಅರಲ್ದಪುದಾ ಸಹಸ್ರಕಿರಣೋದಯಕಾಲಕೆ ಪುಂಡರೀಕಮುಂ
ಸುರಿಪುಗುಮಲ್ತೆ ಚಂದ್ರಶಿಲೆಯುಂ ಜಲಮಂ ಹಿಮರಶ್ಮಿಯೈತರಲ್ ॥

೮೧

ಅರಿಯಲ್ಬ್ರಹ್ಮಜ್ಞಾನಿಗ । ಳೊರೆದುದರೊಳ್ ಸಂಶಯಿಪ್ಪ ಕಾರಣಮಿಲ್ಲಂ ।
ಸಿರಿಯಿರ್ಪಳವರ ವಾಣಿಯೊ । ಳೊರೆಯರವರ್ ವಿಪ್ಲುತಾರ್ಥವಚನ
ಮನೆಂದುಂ ॥

೭೪

ಆತ್ಮಘಾತ ಮಾಡಿಕೊಂಡವರು ಗಾಂಧಾಂಧಕಾರಾವೃತಗಳಾದ ನರಕಲೋಕಗಳನ್ನು ಹೊಂದುವರು!

೨೬

ಇದು ತಾಂ ಸಜ್ಜನಸಂಗಮೆಂಬುದನಿತುಂ ಪುಣ್ಯಂಗಳಿಂದಾದುದೌ!

೧೦೩

ಉರುದೃಪ್ತೋನ್ಮತ್ತರ್ಕಳ । ಗರುವದ ನುಡಿ ರಾಕ್ಷಸೋಕ್ತಿ
ಮುನಿಮತದಿಂದಂ ।
ಸ್ಥಿರಮೆನಿಪ ವೈರಕಂಮೇಣ್ । ಪರಿಭವಕಂ ಹೇತುವಾಗಿ
ಪರಿಣಮಿಪುದದೇ ॥

೭೬

ಉರಿಬಂಧುವ್ಯಸನವುದನ । ವರತಂ ತಡೆಯಿಲ್ಲದಿರ್ದು ಜಿನುಗಲ್ಪಳಿಯಂ ।
ಪರಮಾಪ್ತರ ಮುಂದದೆ ಸಾ । ಸಿರತೊರೆಯೊಡಗೂಡಿಪರಿಗುಮಾ
ಶೋಕರಸಂ ॥

೨೦

ಎತ್ತಂತಾಂ ಸುಖದುಃಖಭೇದಮಿರದೊಂದೇ ರೀತಿಯಲ್ಲಿರ್ಪುದಿ-
ನ್ನೆತ್ತಂತಾಂಜರೆಯಿಂದಹಾರ್ಯರಸಮೆಂಬಂತೊರ್ಮೆಯಿಂದಿರ್ಪುದೋ ।
ಮತ್ತಂಕಾಲದೆ ಭಾವಗುಪ್ತಿಯಳಿದಾ ನೇಹಂ ಸ್ಥಿರಂಗೊಳ್ವಿನಂ
ಸುತ್ತುಂ ಕ್ಷೇಮದೆ ಕೂಡಿಪೆರ್ಮೆವಡೆದಾದಾಂಪತ್ಯಮೇ ಪ್ರಾರ್ಥ್ಯಮೈ ॥

೨೧

ಎನಿತಾದೊಡಮೇನೆಸಕಂ । ಜನಸೇವೆಯೆ ಮುಖ್ಯಮೆಂದು ಸಜ್ಜನರಮತಂ ।

೧೦೮

ಎಲ್ಲವೂ ಅತಿಯಾದರೆ ದೋಷವನ್ನೇ ಉಂಟುಮಾಡುವುದು!

೮

ಎಸೆವ ಕುಸುಮಮುಂ ಕೊಂಡೆತ್ತಿ ಸೂಡಲ್ಮನೋಜ್ಞಂ
ಬಿಸುಟು ಚರಣದಿಂದಂ ತಾಡಿಸಲ್ಬಾರದೆಂದುಂ !

೩

ಎಂತುಂ ವ್ಯವಹರ್ತವ್ಯಮು । ದೆಂತುಂನಿರ್ದುಷ್ಟಮೆನಿಸದಾವ್ಯವಹೃತಿಸೀ- ।
ಮಂತಿನಿಯರ ಸಾಧುತ್ವದೊ । ಳೆಂತಂತೆಯೆ ಮಾತಿನಲ್ಲಿ ಜನದೌರ್ಜನ್ಯಂ ॥

೯೮

ಒಬ್ಬನಿಗೊಬ್ಬನಲ್ಲಿ ಸ್ವಾಭಾವಿಕವಾದ ಪ್ರೀತಿಯುಂಟಾಗುವುದು ಲೋಕದಲ್ಲಿ ಪ್ರಾಣಿಗಳಿಗೆ ಇರತಕ್ಕ ಧರ್ಮವು; ಅದನ್ನೇ ತಾರಾಮೈತ್ರಿಯುಳ್ಳ ಚಕ್ಷುಃಪ್ರೀತಿಯೆಂದು ಜನರು ಔಪಚಾರಿಕವಾಗಿ ಹೇಳುತ್ತಿರುವರು. ಮತ್ತು ಅದನ್ನು ಎಷ್ಟು ವಿಚಾರಿಸಿದರೂ ಮೂಲವು ಸಿಕ್ಕದ ಅನುಭವೈಕವೇದ್ಯವಾದ ಪ್ರಮಾಣವೆಂದು ವಿದ್ವಾಂಸರು ನಂಬುತ್ತಲೂ ಇರುವರು.

೨೮

ಗುರುವರನಾ ಮುನೀಷಿಗುಪದೇಶಿಪ ವೊಲ್ಚಡನಲ್ಲಿಯುಲ್ಲದಾ
ವರಮತಿಶಕ್ತಿಯುಂ ಗುರುವೆ ವರ್ಧಿಪನಿಲ್ಲ ಕೆಡಿಪ್ಪನಿಲ್ಲವೌ।
ಬರಿವರಿ ತೋರಿವಪುರ್ದವರಾ ಫಲದಲ್ಲಿಯೆ ಭೇದವೆಂತೆನಲ್
ವರಮಣಿ ಬಿಂಬಮಂ ಗ್ರಹಿಪುದಲ್ಲದೆ ಲೋಷ್ಠಮದಂಗ್ರಹಿಪ್ಪುದೇ? ॥

೪

ಘನಪ್ರಾಯಶ್ಚಿತ್ತಾದಿಗ। ಳನಿತಿರ್ಪುದರಿಂ ಗೃಹಸ್ಥಧರ್ಮಂ ಕಷ್ಟಂ ॥

೧೨೧

ಜಗದೊಳ್ನೇಹಿಗರ್ಕಿದೆ ದೂರಕವರಂ ಬಲ್ಲಂತೆ ಜಾನಿಪ್ಪರಾ
ಬಗೆಗಂ ಕಂಡರಿವಂತೆ ತೋರ್ದವರಿ ಬಾರಿಪ್ಪರ್ಗಡಾ ಬನ್ನಮಂ ।
ಜಗಮೋ ಜೀರ್ಣವುರಣ್ಯಮೈಸೆ ಪ್ರಿಯಪತ್ನೀನಾಶಮಂ ಕಾಣುತಂ
ಬಗೆ ಬೆಂದಂತೆ ತುಷಾಗ್ನಿಯಿಂದೆ ನಿರುತಂ ಗೋಳಾಟವಿೂ ಬಾಳ್ವೆಯೋ ॥

೫೩

ತಿರಿಯೊಳ್ದಂಪತಿಗಳ ಬಗೆ। ಪರಮೈಕ್ಯಂಗೊಂಡಿರಲ್ಕೆ ಹೇತುವೆನುತ್ತಂ ॥
ಮೆರೆದಪ್ಪುದಪತ್ಯಮದೇ। ವರಹರ್ಷಗ್ರಂಥಿಯೆಂದು ಪೇಳಲ್ಪಡುಗುಂ ॥

೮

ತೇಜಸ್ತೀರ್ಥಜಲಂಗಳ। ನೀಜಗದೊಳ್ ಶುದ್ಧಿಗೊಳಿಪುವಾವುವೊ
ಬಗೆಯಲ್ ॥

೫೩

ದಂಪತಿಗಳ ಪರಸ್ಪರವಾದ ಸ್ನೇಹವೃದ್ಧಿಗೆ ಪುತ್ರೋತ್ಪತ್ತಿಯೇ ಮೇರೆಯು.

೧೦೪

ದ್ವಿಜರ ಬಲಂಬಾಯೊಳ್ಬಾ। ಹುಜರಬಲಂತೋಳ್ಗಳಲ್ಲಿಮೆರೆವುದುಸಹಜಂ

೭೮

ಧರೆಯೊಳ್ ಪೂಜ್ಯತೆಗೆಕತಂ। ವರಗುಣಮಲ್ಲದೆ ವಯಸ್ಸುಲಿಂಗಗಳಲ್ಲಂ!

೧೧೨

ಧರೆಯೊಳ್ತೇಜೋವಂತಂ। ಪರತೇಜಮನೀಕ್ಷಿಸುತ್ತೆ ಸಹಿಸಂನಿಜವಾ ॥
ಹರಿದಶ್ವಂಬೆಳಗೆದಿವಾ। ಕರಕಾಂತಂತಡೆಯದಗ್ನಿಯಂಪೊರಗಿಡದೇ ॥

೫೯

ನೀರೊತ್ತರಿಸಿರೆ ಕಟ್ಟದ। ನೀರಂ ಪೋಗೊಳಿಸಿ ಕಟ್ಟವಮಂ ಕಾಪಿಡರೇ।
ಏರಿದಶೋಕಂ ಮನಮಂ। ಮೀರಲ್ದುಃಖಿಪ್ಪರದಕದೇ ಪ್ರತಿಕಾರಂ॥

೧೦೫

ಪಿರಿಯರವರ್ನಿಜಂ ನುಡಿಯಲಾಗದು ಪೆರ್ವರ್ಗಿಯ ಸಚ್ಚರಿತ್ರೆಯಂ!

೭೮

ಪುರಂಧ್ರಿಮಾನಸಮೆ ಪುಷ್ಪಸುಕೋಮಲಮಿರ್ಪುದೆಂದಿಗುಂ!

೮೧

ಬಾಲ್ಯವೆಂಬುದು ಬಹುಸುಖಪ್ರದವು!

೪

ಬಂಧುವಿಯೋಗಗಳು ವಿಶೇಷವಾಗಿ ಸಂತಾಪವನ್ನು ಉಂಟುಮಾಡುತ್ತಿವೆ.

೬

ಮನದೊಳ್ಗೋಚರಿಪರ್ಥಮ। ನನುಸರಿಪುದುಲೋಗರಾಡುವವ್ಯವಹಾರಂ
ಮುನಿವರ್ಯರವಚಮಂಬಿಡ। ದನುಸರಿಪುದು ನಿಶ್ಚಿತಾರ್ಥಮದು
ಕೇವಲಮೋ॥

೯೯

ಮೊದಲೇಲತೆತುಂಡಾಗಿರ। ಲದರೊಳ್ಕುಸುಮಪ್ರಸೂತಿಗೆಡೆಯಿರ್ದಪುದೇ?

೭೦

ಮೋಡದ ಮಧ್ಯದಿಂದ ಪೂರ್ಣಚಂದ್ರನ ಸಂದರ್ಶನವು
ಇನ್ನೆಷ್ಟು ಸಮಯದಲ್ಲಿ ತಾನೇ ಉಂಟಾಗುವುದೋ?

೧೨೮

ಮೋಹಾತ್ಮಕಗ್ರಂಥಿರೂಪವಾಗಿಯೂ, ಸುಖದುಃಖರೂಪವಾದ ಈ ಸಂಸಾರದಲ್ಲಿ ಮನಸ್ಸುಗಳನ್ನು ಪೋಣಿಸಲು ಸಾಧನವಾದ ನೂಲಿನಂತೆಯೂ ಚೈತನ್ಯವುಳ್ಳ ಪ್ರಾಣಿಗಳಿಗೆ ಆಭ್ಯಂತರವಾದ ಒಂದು ಬಾಧೆಯನ್ನು ಉಂಟುಮಾಡುವುದಾಗಿಯೂ ಇರುವ ಅಪತ್ಯಸ್ನೇಹವೆಂಬುದು ಎಲ್ಲರಿಗೂ ಸಮಾನವಾಗಿದೆ.

೯೪

ಲೋಕದೊಳೊರ್ವಂಗೊರ್ವನೊ ಳಾಕಸ್ಮಿಕಮಪ್ಪಪಕ್ಷಪಾತಮವರ್ಜ್ಯಂ।
ಆಕಲಿತತಂತುವೆಂಬವೋ ಲಾಕರ್ಷಿಯೆ ಸೇರ್ದು ಜನರನೊಂ
ದಾಗಿಸುಗುಂ।

೩೨

ಲೋಕದೊಳುತ್ತಮರಿರ್ದೆಯುದು। ಬೇಕೊಂದೊಡೆವಜ್ರದಿಂದೆಯುಂ
ಕಠಿನತರಂ।
ಸಾಕೆನೆಸುಮದಿಂಮೃದುಲಮು। ದೇಕೆಂಬುದರಡಿಯನರಿವುದಾರಿಂದಕ್ಕುಂ।

೧೨೪

ವಿಧಿಕಷ್ಟಮಂಕೊಡುವೆನೆಂದಿಪ್ಪಾಗತನ್ಮಾರ್ಗಮಂಮಹಿಯೊಳ್ವಾರಿಪ
ಶಕ್ತರಾರೊಳರೊ।

೫೯

ವ್ಯಸನಪೀಡಿತರಾದವರು ಹೇಗಾದರೂ ಅದರ ಉಪಶಮನವನ್ನು
ಮಾಡಿಕೊಳ್ಳಬೇಕು!

೧೧೧

ಸಾರಂ ಸಂತರ ಪೆರ್ಮೆ ತೀರ್ಥಸಮಂ।

೧೧೧

ಸ್ನೇಹವುನಿಮಿತ್ತವನ್ನುಅಪೇಕ್ಷಿಸಿಉಂಟಾಗುತ್ತಿರುವುದೆಂಬುದುಸರಿಯಲ್ಲ.

೩೬

ಸ್ವಸುಖಂಗಳಿಂದೆ ಪ್ರಿಯಜನ। ವ್ಯಸನಂಗಳನಂತೆ ನಿರಸಿಪರ್
ಪ್ರಿಯರೆನ್ನಲ್।
ವಸುಮತಿಯೊಳಾರ್ಗೆ ಪ್ರಿಯರಾ। ರಸಮಾನದ ಮರ್ದನಂತೆ
ಯುವಥವರ್ಗೆಂದುಂ।

೨೬

ಹಿತಮಾಗಿರ್ಪುದು ವೃತ್ತಿ ವೃತ್ತಿಯ ತೆರಂ ವಾಗ್ವಾಣಿಯೆಂತಂತೆಯೇ
ಮತಿಯಾ ಸನ್ಮತಿಯಂತೆ ಸತ್ಪರಿಚಯಂ ಶುದ್ಧಂ ಶುಭಂ ನವ್ಯಮೆಂ।
ದತಿಯಾಗಿರ್ಪ ಗುಣಂಗಳಿಂ ಮೆರೆವಖಂಡಾನಂದರೂಪಕ್ಕನಾ
ರತಮುಂ ಹೇತುವೆನಿಪ್ಪ ಸಾಧುಜನಸಂಗಂ ಭಾವ್ಯಮೆಂದೆಂದಿಗುಂ॥

೧೦೩

ಹಿತವಂ ಸಾಧಿಸಿ ಕೀರ್ತಿಯಂಗಳಿಸುತುಂ ದುರ್ಭಾಗ್ಯವಂ ನೀಗುತುಂ
ಸತತಂ ನಲ್ಮೆಯೊಡರ್ಚಿಸುತ್ತಹಿತರಂ ಬಾರಿಪ್ಪುದಾ ಸಾಧು ಸೂ—।
ನೃತಮೇ ಮಂಗಲಮಾತೆ ತಾನೆ ನಿರುತಂ ಸಂಶುದ್ಧಿಯಾ ದೇವಿಯಿಂ
ದತಿವಿಶ್ವಾಸದೆ ಪೊರ್ದಿ ಸಾಧುಜನರಾರಾಧಿಪ್ಪರಾ ವಾಣಿಯಂ॥

೧೪

ಹೇಗಾದರೂ ಲೋಕದಲ್ಲಿ ದುರ್ಜನರಿಂದ ದುಃಖವುಂಟಾಗುವುದು.

# — ಒಪ್ಪೋಲೆ —

| ಪುಟ | ಪಙ್ಕ್ತಿ | ತಪ್ಪು | ಒಪ್ಪು |
|---|---|---|---|
| 5 | 10 | ಭೂದರ | ಭೂಧರ |
| 10 | 6 | ಅಂತರ್ನಾಟಕೆ | ಅಂತರ್ನಾಟಿಕೆ |
| 13 | 5 | ತೋರ್ರಿಸಿ | ತೋರಿಸಿ |
| 23 | 1 | ಪ್ರಶಂಸನೀಯಮವಾದ | ಪ್ರಶಂಸನೀಯಮನಾದ |
| ೧೦ | ೯ | ಪೂರ್ದ್ವದತ್ತೋ | ಪೊರ್ದ್ವದತ್ತೋ |
| ,, | ೧೫ | ಕಡೆಕಾಗಿ | ಕಡೆಗಾಗಿ |
| ೧೭ | ೨ | ಪಸರಿಂದಂ | ಪೆಸರಿಂದಂ |
| ೪೦ | ೨೩ | ಮೆರಗುಂ | ಮೆರೆಗುಂ |
| ೫೯ | ೧೬ | ಕಷವಮಯ | ಕಷ್ಟವಮಯ |
| ೬೦ | ೨೧ | ಸ್ಮತಿಯಿಂದಂ | ಸ್ಮೃತಿಯಿಂದಂ |
| ೬೬ | ೫ | ಪ್ರಸನ! ಳಾಗು | ಪ್ರಸನ್ನಳಾಗು! |
| ೭೫ | ೧೦ | ಸಂಭೋಧಿಸು | ಸಂಬೋಧಿಸು |
| ೯೩ | ೨೧ | ಎಮ್ಮುಯ | ಎಮ್ಮಯ |
| ೯೪ | ೧೯ | ‖ ೯ ‖ | ‖ ೮ ‖ |
| ೧೨೧ | ೨ | ಒಡುಗೂಡುತೆ | ಒಡಗೂಡುತೆ |
| ೧೨೮ | ೧೪ | ಅಭ್ಯಂತರ | ಆಭ್ಯಂತರ |
| ೧೨೯ | ೧ | ಅದರಿ | ಆದರಿ |

